

# ಶ್ರೀರಾಮಾನುಜ ವೈಭವಂ

ಲೇಖಕರು : ವಿ. ವೆಂಕಟರಾಂ ಭಾಗವತರ್

॥ श्रीः ॥

॥ श्रीमते रामानुजाय नमः ॥

॥ श्रीमते श्रीनिवासरंग महायोगिने नमः ॥

# ಶ್ರೀ ರಾಮಾನುಜ ವೈಭವಂ

ಲೇಖಕರು ಮತ್ತು ಪ್ರಕಾಶಕರು :

ಗಾನವಾರಿಧಿ, ಅಭಿನಯ ವಿಶಾರದ

**ವಿ. ವೆಂಕಟರಾಂ ಭಾಗವತರ್,** ಎಂ.ಎ., ಬಿ.ಎಡ್.

'ಸಾಹಿತ್ಯರತ್ನ'

ಓಬಳಾಪುರ (ಅಂಚೆ) ನೆಲಮಂಗಲ ತಾಲ್ಲೂಕು

ಬೆಂಗಳೂರು (ಗ್ರಾಮಾಂತರ) ಜಿಲ್ಲೆ

*This Book is Printed & Published with the Financial Assistance of*

*TIRUMALA - TIRUPATI - DEVASTHANAMS*

*Under Their Scheme 'Aid to Publish Religious Books'.*

॥ ಶ್ರೀಮತೇ ರಾಮಾನುಜಾಯ ನಮಃ ॥

ಶ್ರೀ ಯದುಗಿರಿ ಯತಿರಾಜಮಠಂ ಪೀಠಾಧೀಶರೂ
ಶ್ರೀಮತ್ಪರಮಹಂಸೇತ್ಯಾದಿ ಶ್ರೀ ಶ್ರೀ ಸಂಪತ್ಕುಮಾರ
ರಾಮಾನುಜ ಜೀಯರ್‌ಸ್ವಾಮಿಗಳು
(ತಿರುನಾರಾಯಣಪುರಂ) ಮೇಲುಕೋಟೆ

# ಆಶೀರ್ವಚನ

ವಿಶಿಷ್ಟಾದ್ವೈತ ವೇದಾಂತ ಸಾರ್ವಭೌಮರಾದ ಶ್ರೀ ಭಗವದ್ರಾಮಾನುಜಾಚಾರ್ಯರು ವ್ಯವಸ್ಥೆಮಾಡಿ ಶಿಷ್ಯರಾದ ನಮಗೆ ತಿಳಿಸಿದಂತೆ, ಭಗವದ್ಭಕ್ತರಿಗೆ ಆಳ್ವಾರುಗಳು, ಗುರುಗಳು, ಆಚಾರ್ಯರು ಎಂದು ತಿಳಿಸಿರುತ್ತಾರೆ. ಆದ್ದರಿಂದಲೇ ವಿಷ್ಣುದೇವ ಸ್ಥಾನಗಳಲ್ಲಿ ಆಳ್ವಾರಾಚಾರ್ಯರ ವಿಗ್ರಹಮೂರ್ತಿಗಳನ್ನು ಪ್ರತಿಷ್ಠಿಸಿ, ಪೂಜಿಸುತ್ತಾ ಬರುತ್ತಿದ್ದೇವೆ. ಆಚಾರ್ಯರುಗಳ ಮೂರ್ತಿ ಪ್ರತಿಷ್ಠಿತವಾಗದಿದ್ದಲ್ಲಿ ಆ ದೇವಸ್ಥಾನದಲ್ಲಿ ತೀರ್ಥಪ್ರಸಾದ ಸ್ವೀಕರಿಸಬಾರದೆಂಬ ನಿಯಮವಿರುವುದು.

ಸಕಲವೇದ ಶಾಸ್ತ್ರ ಸಿದ್ಧಾಂತರೀತ್ಯಾ ಭಗವಂತನ ಕಟಾಕ್ಷದಿಂದ (ಸುಕೃತಪರಿಪಾಕ) ಸತ್ಸಂಗ ಸಹವಾಸವುಂಟಾಗುವುದು. ಇದರಿಂದ ಸದಾಚಾರ ಪ್ರವೃತ್ತಿಯುಂಟಾಗುವುದು, ಅಖಿಲ ದುರಿತಕ್ಷಯವುಂಟಾಗುವುದು. ಅನಂತರ ಅಂತಃಕರಣ ಶುದ್ಧಿಯಾಗಿ, ಅದರಿಂದ ಗುರುಕಟಾಕ್ಷ ಲಭಿಸುವುದು.

**ಗುರೂಪದೇಶಂ ವಿನಾ ಕಲ್ಪಕೋಟಿ ಶತೈರಪಿ ತತ್ತ್ವಜ್ಞಾನಂ ನಭವತಿ ।**

ಗುರೂಪದೇಶವಿಲ್ಲವಾದರೆ ಅವರಿಗೆ ತತ್ತ್ವಜ್ಞಾನ ಉಂಟಾಗುವುದಿಲ್ಲ.

**ಸದ್ಗುರು ಕಟಾಕ್ಷೋಭವತಿ - ತದಾ ಭಗವತ್ಕಥಾಶ್ರವಣ ಧ್ಯಾನಾದೌ ಶ್ರದ್ಧಾಜಾಯತೇ ॥**

ಸದ್ಗುರುಗಳ ಕಟಾಕ್ಷದಿಂದ ಗುರೂಪದೇಶವಾದರೆ ಅಂತಹವರಿಗೆ ಭಗವಂತನ ವಿಷಯದಲ್ಲಿ ಭಕ್ತಿ, ಪ್ರೀತಿ, ಭಗವಂತನ ಕಥಾಶ್ರವಣ, ಧ್ಯಾನಾದಿಗಳಲ್ಲಿ ಶ್ರದ್ಧೆಯುಂಟಾಗುತ್ತದೆ.

ಮೇಲೆ ತಿಳಿಸಿದಂತೆ ಗುರುಕಟಾಕ್ಷ ಹೊಂದಿದ ಗಾನವಾರಿಧಿ, ಅಭಿನಯ ವಿಶಾರದ – ಇತ್ಯಾದಿ ಬಿರುದಾಂಕಿತರಾದ **ಶ್ರೀ ವಿ. ವೆಂಕಟರಾಮ ಭಾಗವತರ್,** ಎಂ.ಎ.,ಬಿ.ಎಡ್., 'ಸಾಹಿತ್ಯರತ್ನ' ಇವರು ಆಚಾರ್ಯರ ಜೀವನಾಮೃತವನ್ನು ಪಾನಮಾಡಿ, ಅನುಭವಿಸಿದ ಅಪಾರ ಸಂತೃಪ್ತಿಯನ್ನು ಎಲ್ಲರೂ ಅನುಭವಿಸಲೆಂಬ ಮಹದಾಶೆಯಿಂದ ಪರಮಾಚಾರ್ಯರಾದ ಶ್ರೀ ರಾಮಾನುಜರ ದಿವ್ಯಚರಿತ್ರೆಯ ಗುರುಪರಂಪರೆಯನ್ನೊಳಗೊಂಡ ಈ **'ಶ್ರೀ ರಾಮಾನುಜ ವೈಭವಂ'** ಗ್ರಂಥವನ್ನು ಹರಿಕಥಾ ಪದ್ಯರೂಪವನ್ನೂ ಸೇರಿಸಿ ಬರೆದು ಎಲ್ಲರೂ ಅದನ್ನು ಓದಿ, ಕಥಾಶ್ರವಣ ಮಾಡಿ ಭಗವದ್ ಭಾಗವತಾಚಾರ್ಯರ ಕಟಾಕ್ಷ ಹೊಂದಲು, ಮುದ್ರಿಸಿ, ಪ್ರಕಾಶಪಡಿಸಿರುವರು. ಈ ಗ್ರಂಥವನ್ನು ಓದಿ ನಾವು ಅತ್ಯಂತ ಸಂತೋಷಪಟ್ಟಿದ್ದೇವೆ.

ಈ ಗ್ರಂಥದಲ್ಲಿ ಗ್ರಂಥಕರ್ತರು ಸ್ವತಃ ಬರೆಯಲಿಲ್ಲ ಗುರು ಕಟಾಕ್ಷದಿಂದ ಬರೆದಿರುವೆನೆಂದು ಸಹಜಾನುಭವವನ್ನು ವ್ಯಕ್ತಪಡಿಸಿದ್ದಾರೆ. ಇದು ಪ್ರಶಂಶನೀಯವಾದದ್ದು. ಈ ಗ್ರಂಥದಲ್ಲಿ ಶ್ರೀಭಗವದ್ರಾಮಾನುಜರ ವೈಭವ ಚರಿತಾಂಶವನ್ನು ಬರೆಯುವಾಗ ಭಕ್ತಿಭಾವದಿಂದ ತಮ್ಮನ್ನು ತಾವೇ ಮರೆತು ಕಥಾಭಾಗವು ಹಿಂದು ಮುಂದಾಗಿರಬಹುದು. ಆ ರೀತಿ ಇದ್ದರೂ ವಾಸ್ತವಾಂಶಕ್ಕೆ ವಿರೋಧವೇನೂ ಇರುವುದಿಲ್ಲ. ವಿಷಯಗಳು ವ್ಯತ್ಯಾಸವಾಗಿದ್ದರೂ ಭಗವಂತನ, ಗುರುಗಳ, ಆಚಾರ್ಯರ ವಿಷಯವೇ ಆಗಿರುವುದರಿಂದ ನಾವು ಹೇಗೆ ಹೇಳಿದರೂ ತಪ್ಪಾಗಲಾರದು.

ಗುರುಪರಂಪರೆಯ ಈ ಭವ್ಯ ಕಥೆಯಲ್ಲಿ ಅಲ್ಲಲ್ಲಿ ಸಂದರ್ಭವನ್ನನುಸರಿಸಿ ಗೀತೆಗಳನ್ನು ವಿವಿಧ ಸ್ವರ, ರಾಗ, ತಾಳ ಸಮನ್ವಿತವಾಗಿ ಬರೆದಿರುವುದಲ್ಲದೆ ಛಂದೋಬದ್ಧ ಪ್ರಾಸವನ್ನನುಸರಿಸಿಯೂ ಬರೆದಿರುವರು. ಈಗಿನ ಕಾಲದಲ್ಲಿ ಈ ರೀತಿ ಬರೆಯುವುದು ಅತಿವಿರಳ. ಅನೇಕರಿಗೆ ಛಂದೋಬದ್ಧವಾಗಿ ಬರೆಯಬೇಕೆಂಬ ಮನಸ್ಸೂ ಇರುವುದಿಲ್ಲ. ಆದ್ದರಿಂದ ಶ್ರೀ ವಿ. ವೆಂಕಟರಾಮ ಭಾಗವತರು ಬರೆದಿರುವುದನ್ನು ನೋಡಿದರೆ, ಅವರಲ್ಲಿ ಸಂಗೀತ, ಸಾಹಿತ್ಯ, ಕವಿತ್ವ, ಭಾಷೆಯ ಸ್ವಾಧೀನತೆ, ಗುರುಗಳು, ಆಚಾರ್ಯರಲ್ಲಿ ಭಕ್ತಿಪರವಶತೆ, ಶ್ರೀ ವೈಷ್ಣವ ಸಂಪ್ರದಾಯ ನಿಷ್ಠೆ ಎಷ್ಟರಮಟ್ಟಿಗೆ ಕ್ರೋಢೀಕೃತವಾಗಿದೆ ಎಂಬುದು ವ್ಯಕ್ತವಾಗುತ್ತದೆ. ಈ ರೀತಿ ಬರೆಯಬೇಕಾದರೆ ಅವರಿಗೆ ದೈವಾನುಗ್ರಹ, ಆಚಾರ್ಯರ ಕೃಪಾಕಟಾಕ್ಷ ಇದ್ದೇ ಇರುವುದೆಂದು ತಿಳಿದುಬರುತ್ತದೆ.

ಈ ಗ್ರಂಥವನ್ನು ಸರ್ವರೂ ಓದ ಬೇಕಾದುದು. ಅದರಲ್ಲೂ ಇದು ಪ್ರತಿಯೊಬ್ಬ ಶ್ರೀವೈಷ್ಣವನ ಆದ್ಯಕರ್ತವ್ಯ. ವೇದದಲ್ಲಿ ತಿಳಿಸಿರುವಂತೆ –

**ಗುರುಹೀನೇ ಗೃಹೇ ವಿಪ್ರಸಕೃತ್‌ಕಾಲಂ ನವಾಸ್ಯಕಂ । ಆಚಾರ್ಯವಾನ್ ಪುರುಷೋವೇದ - ಯಸ್ಯದೇವೇ ಪರಾಭಕ್ತಿ ಯಥಾದೇವೇ ತಥಾ ಗುರೌ-ಮಂತ್ರೇತದ್ದೇವತಾಯಾಂಚ ತಥಾ ಮಂತ್ರಪ್ರದೇ ಗುರೌ ॥**

ಎಂಬಂತೆ ಗುರುಗಳ, ಆಚಾರ್ಯರ ಪ್ರತಿಕೃತಿ ಭಾವಚಿತ್ರವನ್ನು ಇಡುವಂತೆ ಆಚಾರ್ಯರ ವಿಷಯವಾದ ಈ ಗ್ರಂಥವನ್ನು ಅವರವರ ಮನೆಯಲ್ಲಿಟ್ಟು ಆರತಿ ಮಾಡಲೇಬೇಕು. ಕುಟುಂಬ ಕ್ಷೇಮವಾಗುವುದು.

ಗ್ರಂಥಕರ್ತರಾದ **ಶ್ರೀ ವಿ. ವೆಂಕಟರಾಂ ಭಾಗವತರು** ಇದೇ ರೀತಿಯಲ್ಲಿ ಸದ್ಗ್ರಂಥಗಳನ್ನು ಬರೆಯಲು ಭಗವಂತನು ಅವರಿಗೆ ಆಯುರಾರೋಗ್ಯ ಜ್ಞಾನಾದಿಗಳನ್ನು ಅನುಗ್ರಹಿಸಲಿ ಎಂದು ಮಂಗಳಾ ಶಾಸನ ಮಾಡುತ್ತೇವೆ.

ಮಲ್ಲೇಶ್ವರಂ, ಕಲ್ಯಾಣಪುರಿ
ಬೆಂಗಳೂರು

**ಶ್ರೀ ಶ್ರೀ ಸಂಪತ್ಕುಮಾರ ರಾಮಾನುಜಜೀಯರ್ ಸ್ವಾಮಿಗಳು**

॥ ಶ್ರೀ ಮತೇ ರಾಮಾನುಜಾಯ ನಮಃ ॥
॥ ಶ್ರೀ ಮತೇ ಶ್ರೀನಿವಾಸರಂಗ ಮಹಾಯೋಗಿನೇ ನಮಃ ॥

# ಮುನ್ನುಡಿ

ವಿದ್ಯಾವಿನಯ ಸಂಪನ್ನರೂ, ಗುರುದೇವತಾಭಕ್ತ ಶಿರೋಮಣಿಗಳೂ ಆಗಿರುವ ಗಾನವಾರಿಧಿ, ಅಭಿನಯವಿಶಾರದ ಶ್ರೀ ವಿ. ವೆಂಕಟರಾಂ ಭಾಗವತರ್, ಎಂ.ಎ; ಸಾಹಿತ್ಯರತ್ನ, ..ಟಕಾಪುರ, ನೆಲಮಂಗಲ ತಾ॥ ಇವರು ರಚಿಸಿ ಆಚಾರ್ಯರ ಅಂಘ್ರಿಕಮಲಗಳಿಗೆ ಅರ್ಪಣೆ ಮಾಡಿರುವ ಈ **'ಶ್ರೀ ರಾಮಾನುಜ ವೈಭವಂ'** ಎಂಬ ಗ್ರಂಥರತ್ನಕ್ಕೆ ಸಂತೋಷದಿಂದ ಮುನ್ನುಡಿಯನ್ನು ಬರೆಯುತ್ತಿದ್ದೇನೆ.

ಶ್ರೀಯುತ ವಿ. ವೆಂಕಟರಾಂ ಭಾಗವತರ್‌ರವರು ಉತ್ತಮ ಉಪನ್ಯಾಸಕ - ಉಪಾಧ್ಯಾಯರಾಗಿಯೂ, ಶ್ರೇಷ್ಠ ಗ್ರಂಥಕರ್ತರಾಗಿಯೂ, ವರಕವಿ ಮತ್ತು ಸಂಗೀತಗಾರರಾಗಿಯೂ, ಸಂಗೀತ, ಸಾಹಿತ್ಯ ಲೋಕದಲ್ಲಿಯೂ ಮತ್ತು ಭಾಗವತ ಶ್ರೇಣಿಯಲ್ಲಿಯೂ ಈಗಾಗಲೇ ಪರಿಚಿತರಾಗಿದ್ದಾರೆ. ಇವರು ರಚಿಸಿರುವ ಪ್ರಕೃತಗ್ರಂಥವೂ ಇವರ ಆಚಾರ್ಯನಿಷ್ಠೆಗೂ ಮತ್ತು ವೈದುಷ್ಯ ಪ್ರತಿಭೆಗಳಿಗೂ ಕೈಗನ್ನಡಿಯಾಗಿದೆ.

**'ಗುರುಂ ಪ್ರಕಾಶಯೇದ್ಧೀಮಾನ್'** - ಧೀಮಂತರು ಆಚಾರ್ಯರನ್ನು ಬೆಳಕಿಗೆ ತರಬೇಕು - ಎಂದು ಶಾಸ್ತ್ರಗಳು ಸಾರುತ್ತವೆ. ಆ ಸಾರಿಕೆಯನ್ನು ಮನಸ್ಸು, ಮಾತು ಮತ್ತು ಕೃತಿಗಳಿಂದ ದಿಟವಾಗಿಸಿರುವ ಸಜ್ಜನರು ಶ್ರೀ ವೆಂಕಟರಾಂ ಭಾಗವತರು. ಧರ್ಮಾಭಿಮಾನಿಗಳಾಗಿ ಧರ್ಮಾಂಧತೆಯಿಂದ ದೂರವಾಗಿರುವ ಇವರ ಹೃದಯದ ಔದಾರ್ಯವನ್ನು ಇವರು ಶ್ರೀ ಶಂಕರ ಭಗವತ್ಪಾದರು, ಭಗವಾನ್ ರಮಣ ಮಹರ್ಷಿಗಳು ಮತ್ತು ಶ್ರೀ ಭಗವದ್ರಾಮಾನುಜರು - ಇವರ ಕೃತಿಗಳನ್ನು ಕುರಿತು ಬರೆದಿರುವ ಗ್ರಂಥಗಳು ಪ್ರಕಾಶಪಡಿಸುತ್ತವೆ. ಇವರು ಇಲ್ಲಿ ಅವತಾರವರಿಷ್ಠರೂ, ಆಚಾರ್ಯವರೇಣ್ಯರೂ ಆದ

ಭಗವದ್ರಾಮಾನುಜರ ಜ್ಞಾನ, ಭಕ್ತಿ, ವೈರಾಗ್ಯ, ವೈದುಷ್ಯ, ದಯಾದಾಕ್ಷಿಣ್ಯಾದಿ ಆತ್ಮ ಗುಣಸಂಪತ್ತು ಮತ್ತು ಆಚಾರ್ಯ ಕೃತ್ಯಗಳ ವೈಭವವನ್ನು ಸಂಕ್ಷಿಪ್ತವಾಗಿದ್ದರೂ ಉದ್ದೇಶ ಸಾಫಲ್ಯದಿಂದ ಕೃತಾರ್ಥವಾಗಿರುವ ಕೃತಿಯಿಂದ ಮೆರೆಯಿಸಿದ್ದಾರೆ.

ಗ್ರಂಥದ ಕಥಾ ಭಾಗಕ್ಕೆ ಶ್ರೀ ರಾಮಾಕೃಷ್ಣಾಶ್ರಮದ ಪೂಜ್ಯ ಶ್ರೀ ರಾಮಕೃಷ್ಣಾನಂದ ಸ್ವಾಮಿಗಳಿಗೆ ಋಣಿಗಳಾಗಿರುವ ವಿಷಯವನ್ನು ಕೃತಜ್ಞತೆಯಿಂದ ಗ್ರಂಥಾರಂಭದಲ್ಲಿ ಹೇಳಿಕೊಂಡಿರುವುದು ಈಗಿನ ಕಾಲದಲ್ಲಿ ಅಪರೂಪವಾಗಿರುವ ಪುಣ್ಯಕಾರ್ಯವಾಗಿದೆ.

ಶ್ರೀಮದಾಚಾರ್ಯರ ಜೀವನ ಕೃತಿಗಳನ್ನು ಸಾಮಾನ್ಯ ಜನರಿಗೂ ಮನವರಿಕೆಯಾಗುವ ಸರಳ ಸುಂದರ ಶೈಲಿಯಿಂದ ನಿರೂಪಣೆ ಮಾಡುತ್ತಾ ಒಪ್ಪಾಗಿ ಓರಣವಾಗಿರುವ ಕೃತಿ ಈ ಗ್ರಂಥ.

ಗ್ರಂಥವನ್ನು ಓದಲು ಆರಂಭಿಸಿದವರಲ್ಲಿ ಕಥೆಯಲ್ಲಿ ಮುಂದೇನು ? ಮುಂದೇನು ? ಎಂಬ ಕುತೂಹಲವನ್ನು ಉಂಟು ಮಾಡುತ್ತ ಗ್ರಂಥ ಪರಿಸಮಾಪ್ತಿಯವರೆಗೂ ಉತ್ಸಾಹವನ್ನು ತುಂಬುತ್ತಿರುವ ಶಕ್ತಿ ಸೌಂದರ್ಯಪೂರ್ಣವಾದ ಗ್ರಂಥ.

ಭಗವದ್ರಾಮಾನುಜರ ಜೀವನವನ್ನು ಯಥಾವತ್ತಾಗಿ ತಿಳಿಯಲು ಅವರೇ ಸಾಕ್ಷಾತ್ತಾಗಿ ರಚಿಸಿದ ಕೃತಿಗಳು ಮತ್ತು ಅವರ ಸಾಕ್ಷಾತ್ ಶಿಷ್ಯರು ರಚಿಸಿದ ಗ್ರಂಥಗಳು ಮಾತ್ರವೇ ಪರಮಪ್ರಮಾಣ. ಅವರನ್ನು ಕುರಿತು ಶಿಷ್ಯ ಪರಂಪರೆಯಲ್ಲಿ ಅನೇಕ ಕಥೆಗಳು ಮೂಡಿ ಬಂದಿವೆ. ಅವುಗಳಲ್ಲಿ ಗುರುಪರಂಪರಾ ಪ್ರಭಾವ ಮತ್ತು ಪ್ರಪನ್ನಾಮೃತವೇ ಮುಂತಾದ ಸಾಂಪ್ರದಾಯಿಕ ಗ್ರಂಥಗಳು ಚಿತ್ರಿಸಿರುವಂತಹ ಎಲ್ಲ ಕಥಾಭಾಗಗಳನ್ನೂ ಈ ಕೃತಿಯು ಸಂಕ್ಷಿಪ್ತವಾಗಿ ಪರಿಚಯಿಸುತ್ತದೆ. ಶ್ರೀಮದಾಚಾರ್ಯರು ಉಪದೇಶ ಮಾಡಿದ ತತ್ತ್ವಗಳನ್ನೂ ಸಂಕ್ಷಿಪ್ತವಾಗಿ ಸೇರಿಸಿದ್ದರೆ ಗ್ರಂಥದ ಪ್ರಯೋಜನ ಮತ್ತೂ ವೃದ್ಧಿ ಹೊಂದುತ್ತಿದ್ದಿತೆಂಬುದು ನಮ್ಮ ಅನಿಸಿಕೆ.

ಭಗವದ್ರಾಮಾನುಜರ ಜೀವನವನ್ನು ಕುರಿತ ಅನೇಕ ಗ್ರಂಥಗಳನ್ನು ನಾವು ಗಮನಿಸಿದ್ದೇವೆ. ಆದರೆ ಅವರ ಜೀವನ ವೃತ್ತಾಂತವನ್ನು ಹರಿಕಥೆಯ ಪ್ರಯೋಗಕ್ಕೆ ಅನುಕೂಲಿಸುವಂತೆ ರಚಿತವಾಗಿರುವ ಕನ್ನಡ ಭಾಷೆಯ ಪ್ರಪ್ರಥಮ ಕೃತಿ ಇದಾಗಿರುವುದು ಸಂತೋಷದ ವಿಷಯ. ಭಾವರಾಗತಾಳಗಳ ಸಂಪತ್ತಿನಿಂದ ಶೋಭಿಸುತ್ತಿರುವ ಸ್ವವಿರಚಿತ ಗೀತೆಗಳನ್ನೂ, ಕಂದ ಪದ್ಯಗಳನ್ನೂ ಉಚಿತವಾದ ಸ್ಥಳಗಳಲ್ಲಿ ಅಳವಡಿಸಿರುವ ಈ

ರಚನೆಯಲ್ಲಿ ಹರಿಕಥಾಕಾಲಕ್ಷೇಪಗೋಷ್ಠಿಗೂ, ಸಾರಸ್ವತದ ಉಪಾಸಕರಿಗೂ ಆಪ್ಯಾಯಮಾನವಾಗಿರುವುದರಲ್ಲಿ ಸಂದೇಹವಿಲ್ಲ. ಗ್ರಂಥಕರ್ತರನ್ನೂ ಮತ್ತು ಗ್ರಂಥ ರಚನೆಗೆ ಪ್ರೇರಣೆ ಸ್ಫೂರ್ತಿಗಳನ್ನು ನೀಡಿದ ಶ್ರೀ ರಾಮಸಂಜೀವಾಚಾರ್ಯರನ್ನೂ ಕುರಿತು ನಾರಾಯಣ ಸ್ಮರಣ ಪೂರ್ವಕ ಭೂರಿ ಭೂರಿ ಅಭಿನಂದನೆಗಳು.

ಶ್ರೀ ಶ್ರೀ ಪೂಜ್ಯಯದುಗಿರಿ ಸಂಪತ್ಕುಮಾರ ಜೀಯರ್ ಸ್ವಾಮಿಗಳವರು ಇದನ್ನು ಒಪ್ಪಿಸಿಕೊಂಡು ಶ್ರೀ ಭಗವದರ್ಪಣ ಮಾಡಿ ಹರಸಿರುವುದು ಭಗವದ್ಭಾಗವತ ಮನೋಲ್ಲಾಸಕರವಾಗಿದೆ. ಶ್ರೀಮದಾಚಾರ್ಯರ ಅನುಗ್ರಹದಿಂದ ಇನ್ನೂ ಅನೇಕ ಕೃತಿರತ್ನಗಳು ಈ ಗ್ರಂಥಕರ್ತರಿಂದ ರಚಿತವಾಗಲಿ.

**“ರಾಮಾನುಜಾರ್ಯದಿವ್ಯಾಜ್ಞಾ**
**ವರ್ಧತಾಮಭಿವರ್ಧತಾಂ”**

ಇತಿ ನಾರಾಯಣಸ್ಮೃತಯಃ
**ಶ್ರೀ ಶ್ರೀರಂಗಪ್ರಿಯ ಶ್ರೀಪಾದ ಶ್ರೀ ಶ್ರೀಃ**
ಅಷ್ಟಾಂಗಯೋಗ ವಿಜ್ಞಾನಮಂದಿರಂ,
ಬೆಂಗಳೂರು ವಿಭಾಗ

ಧಾತು ಸಂವತ್ಸರದ
ಮಾರ್ಗಶಿರ ಶುದ್ಧ ಪೂರ್ಣಿಮಾ
24-12-1996

# ನನ್ನ ನುಡಿ

॥ ಓಂ ನಮೋ ನಾರಾಯಣಾಯ ॥

॥ ಓಂ ನಮೋ ಭಗವತೇ ಶ್ರೀರಮಣಾಯ ॥

ಸದ್ಗುರು ಶ್ರೀ ರಾಮಾನುಜರ ದಿವ್ಯ ಹಾಗೂ ಪವಿತ್ರ ಜೀವನಚರಿತಾಮೃತವನ್ನು ವರ್ಣಿಸುವ "**ಶ್ರೀ ರಾಮಾನುಜ ವೈಭವಂ**" ಎಂಬ ಈ ಗ್ರಂಥವನ್ನು ಬರೆದವನು ನಾನಾದರೂ ಬರೆಯಿಸಿದವರು, ಬರೆಯಲು ಪ್ರೇರೇಪಿಸಿದವರು - ಇಬ್ಬರು - ಮಹಾನ್‌ಪುರುಷರು. ಬರೆಯಿಸಿದವರು ನಮ್ಮೆಲ್ಲರ ಸದ್ಗುರುಗಳಾದ ಶ್ರೀ ರಾಮಾನುಜಾಚಾರ್ಯರು. ಅವರು ಈ ದಾಸನ ಮೇಲೆ ಇಟ್ಟಿರುವ ಕೃಪೆ ಒಂದು ಕಡೆಯಾದರೆ, ನನಗೆ ಪ್ರೇರಣೆ ಕೊಟ್ಟವರ ಅಭೀಷ್ಟವನ್ನು ಈಡೇರಿಸುವುದು ಮತ್ತೊಂದು ಕಡೆ. ಇವುಗಳೇ ಈ ಉದ್ಗ್ರಂಥ ರಚನೆಗೆ ಪೋಷಕವಾಗಿದೆ.

ಇನ್ನು ಈ ಗ್ರಂಥ ರಚನೆಗೆ ಪ್ರೇರಣೆ ಕೊಟ್ಟವರು ವಯೋವೃದ್ಧರೂ, ಜ್ಞಾನಿಗಳೂ, ಶ್ರೀ ಮಾರುತಿ ಉಪಾಸಕರೂ ಆದ **ಶ್ರೀ ರಾಮಸಂಜೀವಾಚಾರ್ಯರು.** ಇವರು ಶ್ರೇಷ್ಠ ಕೀರ್ತನಕಾರರು, ದೊಡ್ಡಬಳ್ಳಾಪುರ ತಾಲ್ಲೂಕಿನ ಕಸಾಘಟ್ಟದ ನಿವಾಸಿಗಳು. ಇವರು ತಮ್ಮ ಈ ಇಳಿವಯಸ್ಸಿನಲ್ಲಿ ಒಂದು ದಿನ ನನ್ನಲ್ಲಿ ತಮ್ಮ ಅಭೀಷ್ಟವನ್ನು ವ್ಯಕ್ತಪಡಿಸಿದರು. "ಸದ್ಗುರು ಶ್ರೀ ರಾಮಾನುಜಾಚಾರ್ಯರ ಜೀವನ ಚರಿತ್ರೆಯನ್ನು ಕುರಿತು ಹರಿಕಥೆ ಮಾಡಬೇಕೆಂಬ ಮಹದಾಶೆ ನನ್ನಲ್ಲಿ ಮೂಡಿದೆ. ನೀನು ಅವರ ಜೀವನ ಚರಿತ್ರೆಯನ್ನು ಹರಿಕಥಾರೂಪದಲ್ಲಿ ಬರೆದುಕೊಡಬೇಕು" ಎಂದು ಆಜ್ಞಾಪಿಸಿದರು.

ಹೀಗಾಗಿ ಅವರ ಪ್ರೇರಣೆಯಂತೆ ಈ ಗ್ರಂಥವನ್ನು ರಚಿಸಿದ್ದೇನೆ. ಹರಿಕಥೆಗೆ ಅವಶ್ಯವಾಗಿ ಬೇಕಾಗುವ ಸಂಭಾಷಣೆ, ಸಂದರ್ಭೋಚಿತ ಹಾಡುಗಳು, ಕಂದಪದ್ಯಗಳು, ಇವುಗಳನ್ನು ಯಥಾಶಕ್ತಿ ಅಳವಡಿಸಿದ್ದೇನೆ. ಈ ಪ್ರೇರಣೆಯನ್ನಿತ್ತ ಪೂಜ್ಯ ರಾಮಸಂಜೀವಾಚಾರ್ಯರನ್ನು ಅಭಿವಂದಿಸುತ್ತೇನೆ.

ಇನ್ನು ಈ ಗ್ರಂಥ ರಚನೆಗೆ ಆಧಾರಸ್ತಂಭವಾದವರು ಮೈಲಾಪುರದ ಶ್ರೀ ರಾಮಕೃಷ್ಣ ಮಠದ ವ್ಯವಸ್ಥಾಪಕರಾಗಿದ್ದ ಪೂಜ್ಯ ಶ್ರೀ **ಸ್ವಾಮಿರಾಮಕೃಷ್ಣಾನಂದರು.** ಈ ಪ್ರಸ್ತುತ ಗ್ರಂಥವು ಅವರ '**ಶ್ರೀ ರಾಮಾನುಜರ ಜೀವನ**' ಎಂಬ ಆಂಗ್ಲಭಾಷಾ ಗ್ರಂಥದ ಪ್ರತಿಬಿಂಬವೆಂದರೂ ತಪ್ಪಾಗಲಾರದು. ಅವರಿಗೂ ಹಾಗೂ ಮಠದ ವ್ಯವಸ್ಥಾಪಕರಿಗೂ ನಾನು ಚಿರಋಣಿ.

ಈ ಗ್ರಂಥವನ್ನು ಕೇವಲ ಹರಿಕಥೆಯ ದೃಷ್ಟಿಯಿಂದ ಕಾಲಮಿತಿಗೆ ಅಳವಡಿಸಿ, ಮೊಟಕುಗೊಳಿಸುವುದು ಸರಿಯಲ್ಲವೆಂದು ತೋರಿತು. ಮಹನೀಯ ಓದುಗರನ್ನು ಸದ್ಗುರುಗಳ ಜೀವನ ದರ್ಶನದಲ್ಲಿ ಬರುವ ರೋಮಾಂಚಕಾರಿ – ಅಸಂಖ್ಯ ಘಟನೆಗಳಿಂದ ವಂಚಿತರನ್ನಾಗಿಸಲು ಮನಸ್ಸು ಬರಲಿಲ್ಲ.

ಕಥೆಯನ್ನು ಕೇಳುವವರಲ್ಲಿ ಹೆಚ್ಚಾಗಿ ಜನಸಾಮಾನ್ಯರೇ ಇರುತ್ತಾರಾಗಿ ಅವರಿಗೆ ಹೆಚ್ಚು ಪ್ರಿಯವಾದ ಆಡುಭಾಷೆಯನ್ನೇ ಉಪಯೋಗಿಸಿದ್ದೇನೆ.

ನನ್ನ ಈ ಗ್ರಂಥಕ್ಕೆ ಕೃಪೆ ಮಾಡಿ '**ಆಶೀರ್ವಚನ**' ವನ್ನು ದಯಪಾಲಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿರುವ ಶ್ರೀಯದುಗಿರಿ ಶ್ರೀಯತಿರಾಜಮಠಂ ಪೀಠಾಧೀಶರೂ, ಸದ್ಗುರುಗಳೂ ಆದ ಶ್ರೀಮತ್ಪರಮಹಂಸೇತ್ಯಾದಿಶ್ರೀ **ಶ್ರೀ ಸಂಪತ್ಕುಮಾರ ರಾಮಾನುಜ ಜೀಯರ್‌ಸ್ವಾಮಿಗಳ** ಹಾಗೂ ಈ ಗ್ರಂಥವನ್ನು ಆಮೂಲ ಪರಿಷ್ಕರಿಸಿ '**ಮುನ್ನುಡಿ**' ದಯಪಾಲಿಸಿ, ಗ್ರಂಥದ ಮಹತ್ವವನ್ನು ಹೆಚ್ಚಿಸಿರುವ ಮಹಾನ್ ವಿದ್ವನ್ಮಣಿಗಳಾದ, ಸದ್ಗುರು ಶ್ರೀಮತ್ಪರಮಹಂಸೇತ್ಯಾದಿ ಶ್ರೀ ಶ್ರೀ **ರಂಗಪ್ರಿಯ ಮಹಾದೇಶಿಕರ್ ಸ್ವಾಮಿಗಳ** ತಿರುವಡಿಗಳಲ್ಲಿ ನನ್ನ, ಈ ದಾಸನ ಭಕ್ತಿಯುತ ಅನಂತಾನಂತ ನಮನಗಳು.

ಈ ಗ್ರಂಥ ಪ್ರಕಟಣೆಗೆ ಪ್ರೋತ್ಸಾಹವನ್ನಿತ್ತ ಶ್ರೀಯುತರುಗಳಾದ ಅಭಿನವರಾಮಾನುಜ, ಪಾಂಚರಾತ್ರಾಗಮರತ್ನ ಎನ್. ರಾಮಕೃಷ್ಣಾಚಾರ್ಯರು, ಶ್ರೀ ರಾಮಾನುಜ ಆಶ್ರಮಪೀಠಂ ಆಚಾರ್ಯರು; ಬಸವನಹಳ್ಳಿ, ವಿದ್ವಾನ್ ಬಿ.ಎಸ್. ವೇಣುಗೋಪಾಲನ್, ನರಸೀಪುರ; ಕೆ.ಆರ್. ನಾರಾಯಣ್ ಎಂ.ಎ.,ಎಲ್.ಜಿ. ಕಲ್ಯ; ಎಸ್.ವಿ.ಟಿ. ಸ್ವಾಮಿ, ಜ್ಯೋತಿಷ ವಿದ್ವಾನ್, ಬೆಂಗಳೂರು; ಪಾಂಚರಾತ್ರಾಗಮ ಚತುರ, ವಿದ್ವಾನ್ ಕೆ.ಆರ್. ಹನುಮಂತಸ್ವಾಮಿ, ಮಹಿಮಾಪುರ; ವಿದ್ವಾನ್ ರಾಮಮೂರ್ತಿ, ಅಧ್ಯಕ್ಷರು, ವಿದ್ವಾನ್ ಶ್ರೀನಿವಾಸ ಗೋಪಾಲ ಭಟ್ಟರ್, ಕಾರ್ಯದರ್ಶಿ, ಶ್ರೀ ವೇಣುಗೋಪಾಲ ಸ್ವಾಮಿ ಸೇವಾ ಸಮಿತಿ, ಹೆಮ್ಮರಗಾಲ; ಕಲಾರತ್ನ ಗೋಪಾಲಕೃಷ್ಣಮೂರ್ತಿ, ಹರಿಕಥಾ ವಿದ್ವಾನ್,

ನೆಲಮಂಗಲ; ಸಂ|| ವಿದ್ವಾನ್ ಜಿ.ಆರ್. ರಾಮಕೃಷ್ಣನ್, ಕುಣಿಗಲ್; ಮೃದಂಗ ವಿದ್ವಾನ್ ಅಂಜನ್‌ಕುಮಾರ್, ತುಮಕೂರು; ಬೆಳ್ಳಿಕಿರೀಟದ ಅಂಜನನೇಯರೆಂದೇ ಹೆಸರು ಪಡೆದಿರುವ, ಖ್ಯಾತರಂಗನಟಿ, ಕೀರ್ತನ ವಿದ್ವಾನ್ ವೆಂಕಟದಾಸರು, ಹಸರುವಳ್ಳಿ; ವಿದ್ವಾನ್ ಕೃಷ್ಣಮೂರ್ತಿ, ಸುಗ್ಗನಹಳ್ಳಿ, ಹರಿಕಥಾವಿದ್ವಾನ್ ಬಾಲಸುಬ್ರಹ್ಮಣ್ಯಂ, ಘೋರಘಟ್ಟ; ಸಂಗೀತ ಸುಧಾನಿಧಿ ರಂಗಧಾಮಾಚಾರ್ಯರು, ಲಕ್ಕೇನಹಳ್ಳಿ; ಈ ಮಹನೀಯರುಗಳಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

ಈ ಗ್ರಂಥವನ್ನು ಅಚ್ಚು ಹಾಕಿಸಿ ಪ್ರಕಟಿಸಲು ಸಂಪೂರ್ಣ ಧನ ಸಹಾಯವನ್ನು ಮಾಡಿರುವ ತಿರುಪತಿಯ ತಿರುಮಲ-ತಿರುಪತಿ ದೇವಸ್ಥಾನಗಳ ಅಧಿಕಾರ ವರ್ಗದವರಿಗೆ ನನ್ನ ಅನಂತ ಅಭಿನಂದನೆಗಳು.

ಅಂತಿಮವಾಗಿ ಈ ಗ್ರಂಥವನ್ನು ಅಚ್ಚುಕಟ್ಟಾಗಿ, ಸುಂದರವಾಗಿ ಮುದ್ರಿಸಿಕೊಟ್ಟಿರುವ ಶ್ರೀರಕ್ಷಾ ಗ್ರಾಫಿಕ್ಸ್, ಬಳೇಪೇಟೆ ವೃತ್ತ, ಬೆಂಗಳೂರು, ಇವರಿಗೆ ನನ್ನ ಕೃತಜ್ಞತೆಗಳು.

ಇತಿ

ಶ್ರೀ ರಾಮಾನುಜದಾಸನ್

**ವಿ. ವೆಂಕಟರಾಂ ಭಾಗವತರ್**, M.A.,B.Ed.,

ಸಾಹಿತ್ಯರತ್ನ

ನಿವೃತ್ತ ಉಪನ್ಯಾಸಕರು

ಓಬಳಾಪುರ (ಅಂಚೆ)
ನೆಲಮಂಗಲ ತಾಲ್ಲೂಕು
ಬೆಂಗಳೂರು (ಗ್ರಾ) ಜಿಲ್ಲೆ

# ಪರಿವಿಡಿ

ಪುಟ ಸಂಖ್ಯೆ

ಶ್ರೀಃ

॥ ಓಂ ನಮೋ ಭಗವತೇ ಶ್ರೀ ರಾಮಾನುಜಾಯ ॥

# 1

# ಶ್ರೀರಾಮಾನುಜರ ಜನನ

**ರಾಗ-ನಾಟ ೧** **ಅಟತಾಳ**

ನಮಿಪೆಪ್ರ । ಥಮದಿವಿಷ್ವಕ್ಸೇನಗೆ ।
ಶ್ರೀಮನ್‌ವಿಷ್ಣುವಿನ । ಸೇನಾಪತಿಗೆ ।।ಪ।।
ನಮ್ಮವಿಘ್ನಗಳೆಲ್ಲವನ್ನು । ಭಗ್ನಪಡಿಸುವದಂಡಧರಗೆ ।
ರಮೆಯ ಪಾದಗಳಲ್ಲಿನಿರತ । ಆಶ್ರಯವ ಪಡೆದಧೀರಗೆ ।।೧।।

ನಮಿಪೆನಂತರಗುರು । ರಾಮಾನುಜಗೆ ।
ನಮ್ಮಶ್ರೀವೈಷ್ಣವ । ಧರ್ಮೋದ್ಧಾರಗೆ ।।
ಮಮತೆಯಿಂದಲಿ ಎಲ್ಲರಿಗೂ । ದಾಸ್ಯಭಕ್ತಿಯಧೀಕ್ಷೆ ನೀಡಿ ।
ಕಮ್ಮಗೋಲನಪಿತನಮಂತ್ರವ । ಬೋಧಿಸಿದಗುರುವರ್ಯಗೆ ।।೨।।

ಸುಮನಸರಿಗೆ ಇಂದು । ಕಥೆಯನೊಂದನುಪೇಳ್ವ ।
ರಾಮಾನುಜರ । ದಿವ್ಯಚರಿತೆಯ ।।
ಗಮನವಿಟ್ಟು ಕೇಳಿರಿದನು । ಧನ್ಯರೆನಿಸಿ ಎಂದೆಂದು ।
ರಮಾಪತಿಯಪಾದಸಂಪದ । ಗಳಿಸಿಭಾಗ್ಯವಂತರಾಗಿ ।।೩।।

ಶ್ರೀ ಪೆರಂಬದೂರು ಒಂದು ಕ್ಷೇತ್ರ. ಇದು ಮದ್ರಾಸಿಗೆ ಆಗ್ನೇಯದಿಕ್ಕಿಗೆ 30 ಮೈಲಿಗಳ ದೂರದಲ್ಲಿದೆ. ಸುಮಾರು ಒಂದು ಸಾವಿರ ವರ್ಷಗಳ ಹಿಂದೆ ಈ ಹಳ್ಳಿಯಲ್ಲಿ ಒಬ್ಬರು ಪರಮಭಕ್ತ ಬ್ರಾಹ್ಮಣರಿದ್ದರು. ಅವರ ಹೆಸರು **ಆಸೂರಿ ಕೇಶವಾಚಾರ್ಯರು.**

**ಯಾಮುನಾಚಾರ್ಯರು** ಶಾಸ್ತ್ರ ವೇದೋಪನಿಷತ್ತು ಪುರಾಣೇತಿಹಾಸಗಳ ಅಧ್ಯಯನವನ್ನು ಮಾಡಿ ಚಿಕ್ಕ ವಯಸ್ಸಿನಲ್ಲಿಯೇ ಮಹಾನ್ ಪಂಡಿತರಾಗಿದ್ದರು. ಒಮ್ಮೆ ಇವರು ಪಾಂಡ್ಯರಾಜನ ಆಸ್ಥಾನ ಪಂಡಿತ **ಕೋಲಾಹಲ**ನೆಂಬುವನನ್ನು ವಾದದಲ್ಲಿ ಸೋಲಿಸಲಾಗಿ ಪಾಂಡ್ಯರಾಜ ತನ್ನ ಅರ್ಧ ಸಿಂಹಾಸನವನ್ನು ಬಿಟ್ಟು ಕೊಟ್ಟು ಅವರನ್ನು ಸನ್ಮಾನಿಸಿದ್ದನು. ಮಹಾರಾಣಿಯು ಚಿಕ್ಕ ವಯಸ್ಸಿನ ಯಾಮುನಾಚಾರ್ಯರನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು "ಆಳವಂದಾರ್, ಆಳವಂದಾರ್" ಎಂದು ಪ್ರೀತಿಯಿಂದ ಕರೆದಿದ್ದಳು.

ಹೀಗಾಗಿ ಕೆಲಕಾಲ ಯಾಮುನಾಚಾರ್ಯರು ರಾಜರಾಗಿದ್ದರು. ಆದರೆ ಅವರಿಗೆ ಈ ವೈಭವಯುತ ಜೀವನ ಹಿಡಿಸಲಿಲ್ಲ, ತಮ್ಮ ಸಿಂಹಾಸನವನ್ನು ತ್ಯಜಿಸಿ,**ಮಣಕ್ಕಾಲ್‌ನಂಬಿ** ಎಂಬ ಸನ್ಯಾಸಿಗಳ ಶಿಷ್ಯರಾಗಿ, ಈ ಸಮಯದಲ್ಲಿ ಶ್ರೀರಂಗವನ್ನು ಸೇರಿ ಭಿಕ್ಷೆಬೇಡಿ ಜೀವನ ಸಾಗಿಸುತ್ತಿದ್ದರು.

ತಮ್ಮ ಗುರುಗಳು ದೇಹಬಿಟ್ಟ ಮೇಲೆ ಇವರು ವೈಷ್ಣವ ಸಮುದಾಯದ ನಾಯಕರಾದರು. ವೈಷ್ಣವರು ಇವರ ಅಪೂರ್ವತ್ಯಾಗ, ವೈರಾಗ್ಯ, ಪಾಂಡಿತ್ಯ, ಸಹನಶೀಲತೆ, ನಿರ್ಧಾರಿತ ಗುರಿ ಇವುಗಳಿಗೆ ಮಾರು ಹೋಗಿದ್ದರು. ಇವರು ಅನೇಕ ಭಕ್ತಿ ಕವಿತೆಗಳನ್ನು ರಚಿಸಿದ್ದರು. ಅವುಗಳು ಎಲ್ಲರಿಗೂ ಪ್ರಿಯವಾಗಿದ್ದವು. ಅನೇಕ ತತ್ಪರರಾದ ವೈಷ್ಣವರು ಇವರ ಶಿಷ್ಯರಾದರು. ಇವರ ಸೇವೆ ಮಾಡಿ ತಮ್ಮ ಜನ್ಮಗಳನ್ನು ಸಾರ್ಥಕಪಡಿಸಿಕೊಂಡರು.

ಅಂತಹವರಲ್ಲಿ **ಪೆರಿಯತಿರುಮಲೈನಂಬಿ** (ಶ್ರೀ ಶೈಲಪೂರ್ಣ)ಯವರು ಯಾಮುನಾಚಾರ್ಯರ ಮುಖ್ಯ ಶಿಷ್ಯರಾಗಿದ್ದರು. ವಯೋವೃದ್ಧರು. ಇವರು ತಮ್ಮ ಗೃಹಸ್ಥಾಶ್ರಮವನ್ನು ಬಿಟ್ಟು ಗುರುಗಳಿಂದ ಸನ್ಯಾಸ ಸ್ವೀಕರಿಸಿ ಯಾಮುನಾಚಾರ್ಯರೊಂದಿಗೆ ಕಾಲ ಕಳೆಯುತ್ತಿದ್ದರು. ಅವರಿಗೆ ಇಬ್ಬರು ಸಹೋದರಿಯರಿದ್ದರು. ಆ ಇಬ್ಬರಲ್ಲಿ ದೊಡ್ಡವಳು **ಭೂಮಿಪಿರಾಟ್ಟಿ** (ಭೂದೇವಿ) ಅಥವಾ**ಕಾಂತಿಮತಿ.** ಚಿಕ್ಕವಳ ಹೆಸರು **ಪೆರಿಯಪಿರಾಟ್ಟಿ** (ಮಹಾದೇವಿ, ಶ್ರೀದೇವಿ, ದ್ಯುತಿಮತಿ).

ಶ್ರೀ ಪೆರಂಬುದೂರಿನ ಆಸೂರಿ ಕೇಶವಾಚಾರ್ಯರು ಕಾಂತಿಮತಿಯನ್ನು ಮದುವೆಯಾದರು. ಮಹಾದೇವಿಯ ವಿವಾಹವನ್ನು ಪಕ್ಕದಹಳ್ಳಿಯ ಕಮಲನಾರಾಯಣ ಭಟ್ಟರೊಂದಿಗೆ ನೆರವೇರಿಸಿದರು.

ತಂಗಿಯರಿಬ್ಬರ ವಿವಾಹಗಳು ಮುಗಿದ ಮೇಲೆ ಶ್ರೀ ಶೈಲಪೂರ್ಣರು ನಿಶ್ಚಿಂತರಾಗಿ ತಮ್ಮ ಗುರುಗಳಾದ ಯಾಮುನಾಚಾರ್ಯರ ಬಳಿ ಭಗವದ್ಭಕ್ತಿಯಲ್ಲಿ ಕಾಲ ಕಳೆದರು.

ಆಸೂರಿಕೇಶವಾಚಾರ್ಯರು ಯಜ್ಞಯಾಗಾದಿಗಳನ್ನು ನಡೆಸುವುದರಲ್ಲಿ ಹೆಸರು ಗಳಿಸಿದ್ದರು. ಇವರಿಗೆ "ಸರ್ವಕ್ರತು" ಎಂಬ ಬಿರುದೂ ಸಹ ಬಂದಿತ್ತು. ಹೀಗಾಗಿ ಅವರ ಪೂರ್ಣಹೆಸರು **"ಶ್ರೀಮದಾಸೂರೀಸರ್ವಕ್ರತು ಕೇಶವದೀಕ್ಷಿತ"** ಎಂದಿತ್ತು.

ವಿವಾಹದ ನಂತರ ದಂಪತಿಗಳಿರ್ವರು ಸಂತೋಷವಾಗಿ ಹಲವು ವರ್ಷಗಳು ಜೀವನ ಸಾಗಿಸಿದರು. ಆದರೆ ಕೇಶವಾಚಾರ್ಯರಿಗೆ ಸಹಜವಾಗಿಯೇ ಮಕ್ಕಳಿಲ್ಲದ ಕೊರತೆ ಉಂಟಾಯಿತು. ಅವರ ಮನಸ್ಸಿನಲ್ಲಿ ಒಂದು ದೃಢ ನಿರ್ಧಾರವಿತ್ತು. ಯಜ್ಞಯಾಗಾದಿಗಳಿಂದ ದೇವರು ತೃಪ್ತನಾಗುತ್ತಾನೆ. ಅವನು ಸಂತಾನವನ್ನು ಕೊಟ್ಟೇ ಕೊಡುತ್ತಾನೆ.

ಯಜ್ಞವಿಪಪರೋಧರ್ಮೋ ಭಗವತ್ ಪ್ರೀತಿಕಾರಕಃ ।
ಅಭೀಷ್ಟಕರ್ಮಧುಗ್‌ಯಜ್ಞಃತಸ್ಮಾತ್ಯಜ್ಞಃ ಪರಾಗತಿಃ ॥

"ಯಜ್ಞ ಮಾಡುವುದು ಒಂದು ಶ್ರೇಷ್ಠಕರ್ತವ್ಯ. ಇದು ಭಗವಂತನಿಗೆ ಪ್ರಿಯವಾದದ್ದು. ಇದು ನಮ್ಮ ಇಷ್ಟಾರ್ಥಗಳನ್ನೆಲ್ಲಾ ಪೂರ್ಣಗೊಳಿಸುತ್ತದೆ. ಆದ ಕಾರಣ ಯಜ್ಞವೇ ಪರಾಗತಿ".

**ಬೇಹಾಗ್‌ರಾಗ** **ಆದಿತಾಳ**

ಬಾರೆಲೆಕಾಂತಿಮತಿ । ಮಾಡುವಯಾಗವ ।
ಪರಮಾತ್ಮನನುಗ್ರಹ । ಪಡಯೊಣ ನಾವಿಂದು ॥
ವರಪುತ್ರ ಕಾಮೇಷ್ಟಿಯಿಂ । ಪಡೆಯನೆದಶರಥ ।
ವರನಾಲ್ವಪುತ್ರರನು । ಪರಮಹರುಷದಿ ॥೧॥

ತಿರುವಲ್ಲಿಕೇನಿಯ । ಸರೋವರದಬಳಿ ।
ವರಪಾರ್ಥಸಾರಥಿಯ । ದಿವ್ಯಸನ್ನಿಧಿಯಲ್ಲಿ ॥
ಪರಮವೈಷ್ಣವನ । ತೃಪ್ತಿಗೊಳಿಸಿನಾವು ।
ಪರಿಪರಿಯಿಂದಲಿ । ಪ್ರಾರ್ಥಿಸುವ, ಅವನ ॥೨॥

ಈ ರೀತಿ ಸಂಕಲ್ಪ ಮಾಡಿಕೊಂಡು ತನ್ನ ಪತ್ನಿಯೊಡನೆ ವೃಂದಾರಣ್ಯಕ್ಕೆ ತೆರಳಿದರು. ಅಲ್ಲಿ ಶ್ರೀ ಪಾರ್ಥಸಾರಥಿಯನ್ನು ತಮ್ಮ ಯಜ್ಞದಿಂದ ಸಂತುಷ್ಟನನ್ನಾಗಿಸಿ ಮಗನನ್ನು ಪಡೆಯಬೇಕೆಂದು ಅಲ್ಲಿಯ 'ತಿರುವಲ್ಲಿಕೇನಿ' ಎಂಬ ಸರೋವರದ ಬಳಿ ಯಜ್ಞವನ್ನು ಆಚರಿಸಿದರು. ಆಸಳವನ್ನು ಈಗ ಟ್ರಿಪ್ಲಿಕೇನ್ ಎಂದು ಕರೆಯುತ್ತಾರೆ.

ಯಜ್ಞ ಪೂರ್ಣಗೊಂಡ ಮೇಲೆ ಕೇಶವಾಚಾರ್ಯರು ಸ್ವಪ್ನದಲ್ಲಿ ಶ್ರೀ ಪಾರ್ಥಸಾರಥಿಯನ್ನು ನೋಡಿದರು.

**ಸ್ವಾಮಿಪಾರ್ಥಸಾರಥಿ-ಕಂದ** **ರಾಗ-ದರ್ಬಾರ್**

ಮೆಚ್ಚಿದೆ ನಿಮ್ಮಿಯ ಭಕ್ತಿಗೆ
ಸಚ್ಚರಿತರೆ, ತೊರೆಯಿರೀ ನಿಮ್ಮಿಯ ದುಗುಡವಂ ।
ವಿಚ್ಛೇದಿಸಲಧರ್ಮವಂ
ಮೆಚ್ಚಿನ ಪುತ್ರನಾಗಿ ಜನಿಸಿ ನಿಮಗೆ, ಮೆರೆವೆಂ ॥

"ಎಲೈ ಸರ್ವಕ್ರತು, ನಿನ್ನ ಸದ್ಗುಣಗಳನ್ನು ಹಾಗೂ ದೃಢಭಕ್ತಿಯನ್ನು ನೋಡಿ ನಾನು ಮೆಚ್ಚಿದ್ದೇನೆ ಚಿಂತಿಸಬೇಡ. ನಾನೇ ನಿನ್ನ ಮಗನಾಗಿ ಹುಟ್ಟುತ್ತೇನೆ. ಈಗಿನ ಪರಿಸ್ಥಿತಿಯಲ್ಲಿ ಜನರು ದುರ್ಗುಣಗಳಿಂದ ಪ್ರೇರಿತರಾಗಿ, ಹಿಂದಿನ ಗುರುಗಳು, ಉಪದೇಶಕರು ಮಾಡಿದ ಉಪದೇಶಗಳನ್ನು ಸರಿಯಾಗಿ ತಿಳಿದುಕೊಳ್ಳಲಾರದೆ ತಾವೇ ದೈವಪುರುಷರೆಂದು ತಿಳಿದು, ಅಧರ್ಮಿಗಳಾಗಿ ಜೀವನವನ್ನು ಹಾಳು ಮಾಡಿಕೊಳ್ಳುತ್ತಿದ್ದಾರೆ. ಈ ಸಂದರ್ಭದಲ್ಲಿ ನಾನೇ ಆಚಾರ್ಯನಾಗಿ ಅವತರಿಸದೇ ಹೋದರೆ ಅವರಿಗೆ ಮುಕ್ತಿಯಿಲ್ಲ. ನಿನ್ನ ಪತ್ನಿಯೊಂದಿಗೆ ಮನೆಗೆ ಹೋಗು. ನಿಮ್ಮಗಳ ಆಸೆಯನ್ನು ಪೂರೈಸುತ್ತೇನೆಂದು ಅಭಯವನ್ನು ಕೊಟ್ಟನು"

ಬೆಳಗ್ಗೆ ಆಚಾರ್ಯರು ಸ್ವಪ್ನದ ವಿಷಯವನ್ನು ಹೆಂಡತಿಗೂ ತಿಳಿಸಿದರು. ಇಬ್ಬರೂ ಪರಮಾನಂದಭರಿತರಾಗಿ ತಮ್ಮ ಊರಿನ ಕಡೆ ಪ್ರಯಾಣ ಬೆಳಸಿದರು.

ಒಂದು ವರ್ಷದಲ್ಲೇ ಮಹಾಭಾಗ್ಯವಂತೆ ಕಾಂತಿಮತಿಯು ಎಲ್ಲಾ ಪವಿತ್ರ ಚಿಹ್ನೆಗಳಿರುವ ಸ್ಫುರದ್ರೂಪಿ ಗಂಡು ಮಗುವನ್ನು ಹಡೆದಳು. ಆಮಗುವೇ ಶ್ರೀ ರಾಮಾನುಜರು.

**ತೋಹರ** **ರಾಗ-ಕಲ್ಯಾಣಿ**

ಜನ್ಮವೆತ್ತಿದರು ರಾಮಾನುಜರು ಪಿಂಗಲವತ್ಸರ
ಚೈತ್ರಮಾಸದಿ । ಜನ್ಮನಕ್ಷತ್ರ ಆರ್ದ್ರೆ ಶುಭ
ಪಂಚಮಿ ಗುರುವಾಸರದಂದು ॥೧॥

ಇಳೆಯ ಅಂಡವನೆನಿಸಿ ಜಗದ ಜಂಗುಳಿಗೆ
ವೈಷ್ಣವ ದೀಕ್ಷಯನಿತ್ತು ಭಕ್ತಿಮಾರ್ಗವ ತೋರೆ ।
ಕಳೆಯೆಜಗಳವ ದ್ವೈತಾದ್ವೈತಿಗಳ ವಿಶಿಷ್ಟಾದ್ವೈತವ
ಸ್ಥಾಪಿಸಿದ ಗುರುವರ ॥೨॥

ಅವರು ಹುಟ್ಟಿದ್ದು ಶಕ ವರ್ಷ 939, ಕ್ರಿ.ಶ. 1017 ಗುರುವಾರ, 12ನೇ ಚೈತ್ರ, ಶುಕ್ಲಪಕ್ಷದ ಐದನೆದಿನ, ಪಿಂಗಲ ಸಂವತ್ಸರ, ಜನ್ಮನಕ್ಷತ್ರ–ಆರ್ದ್ರಾ. ಆದ್ದರಿಂದ ಅವರ ಗೋತ್ರ ಹಾರೀತು, ಅವರು ಜ್ಞಾನ ರವಿಯಾಗಿ ಜನರ ಅಜ್ಞಾನಾಂಧಕಾರವನ್ನು ತೊಡೆದು ಹಾಕಲು ಜನ್ಮ ತಾಳಿದರು.

ಅದೇ ಸಮಯದಲ್ಲಿ ಕಾಂತಿಮತಿಯ ತಂಗಿ ಮಹಾದೇವಿಯೂ ಸಹ ಒಂದು ಗಂಡು ಮಗುವಿಗೆ ಜನ್ಮವಿತ್ತಳು. ಕೆಲವು ದಿನಗಳ ನಂತರ ಮಹಾದೇವಿಯು ತನ್ನ ಅಕ್ಕ ಹಾಗೂ ಮಗುವನ್ನು ನೋಡಲು ಶ್ರೀ ಪೆರಂಬುದೂರಿಗೆ ಬಂದಳು.

ಅದೇ ಸಮಯಕ್ಕೆ ವೃದ್ಧರಾದ ಶ್ರೀ ಶೈಲಪೂರ್ಣರು ವಿಷಯ ತಿಳಿದು ಇಬ್ಬರು ಮಕ್ಕಳನ್ನು ನೋಡಿ ಹರಸಲು ಬಂದರು. ಕಾಂತಿಮತಿಯ ಮಗುವಿನಲ್ಲಿ ನಮ್ಮಾಳ್ವಾರರ ತಮ್ಮ ತಿರುವಾಯ್ಮೊಳಿಯಲ್ಲಿ ಮುಂದೆ ಅವತರಿಸುವ ಶ್ರೀ ವೈಷ್ಣವಧರ್ಮೋದ್ಧಾರಕನ ದೈವೀ ಗುಣಗಳ ವರ್ಣನೆಯಂತೆ, ಎಲ್ಲ ಗುಣಗಳನ್ನೂ ಶ್ರೀ ಶೈಲಪೂರ್ಣರು ಕಂಡರು. ಆದ್ದರಿಂದ ಈ ಮಗು ಲಕ್ಷ್ಮಣನ ಅವತಾರವೆಂದೇ ನಿರ್ಧರಿಸಿದರು. ಈ ಕಲಿಯುಗಕ್ಕೆ ಅನಂತ ದೇವನೆಂದು ಭಾವಿಸಿದರು. ಆದ್ದರಿಂದ ಕಾಂತಿಮತಿಯ ಮಗುವನ್ನು ರಾಮಾನುಜನೆಂತಲೂ, ಮಹಾದೇವಿಯ ಮಗುವನ್ನು ಗೋವಿಂದನೆಂತಲೂ ಕರೆದರು.

**ರಾಗ-ನೀಲಾಂಬರಿ** **ಅಟ್ಟತಾಳ**

ತೂಗಿರೆ ರಾಮಾನುಜನ । ತೂಗಿರೆ ಗೋವಿಂದನ ।
ತೂಗಿರೆ ಪರಮಶ್ರೀ । ವೈಷ್ಣವರ ॥ಪ॥
ಬೇಗಮಲಗಿರೆಂದು । ಕಂದರ ತೊಟ್ಟಿಲ ।
ಬಾಗಿವೈಯ್ಯಾರದಿ । ತೂಗಿರೇ ॥೧॥

ನಾಗಲೋಕದಿಂ । ಬಂದ ಲಕ್ಷ್ಮಣನ ।
ನಾಗ ಕನ್ನಿಕೆಯರು । ತೂಗಿರೇ ॥

ನಾಗವೇಣಿಯರು । ನೇಣುಪಿಡಿದುಕೊಂಡು ।
ಯೋಗಿಗೋವಿಂದನ । ತೊಟ್ಟಿಲತೂಗಿರೇ ॥೨॥

ಬಾಲರಾಮಾನುಜನ । ಇಳೆಯ ಅಂಡವನ ।
ನೀಲಕುಂತಳೆಯರು । ತೂಗಿರೇ ॥
ಬಾಲಗೋವಿಂದನ । ರಾಮಾನುಜ ನನುಜನ ।
ಬಾಲೆಯರೆಲ್ಲರು । ಹರುಷದಿ ತೂಗಿರೇ ॥೩॥

ರಾಮಾನುಜರ ಹಾಗೂ ಲಕ್ಷ್ಮಣನ ಜನನದ ತಿಂಗಳು ಮತ್ತು ರಾಶಿಚಕ್ರ ಒಂದೇ ಆಗಿವೆ. ಚೈತ್ರ ಮಾಸ, ಕರ್ಕಾಟಕ ರಾಶಿ.

ಆ ಮಕ್ಕಳಿಗೆ ವಿಧಿವತ್ತಾಗಿ ಅನ್ನಪ್ರಾಶನ, ಕರ್ಣವೇಧನ, ಚಾಲಕರ್ಮ, ಅಕ್ಷರಾಭ್ಯಾಸ, ಕಾಲಾನಂತರ ಉಪನಯನ ಹೀಗೆ ಎಲ್ಲ ಕರ್ಮಗಳನ್ನೂ ಆಚರಿಸಿದರು.

ಬಾಲ್ಯದಿಂದಲೇ ರಾಮಾನುಜರು ಸಾಧು-ಸಂತರನ್ನು ಬಹಳವಾಗಿ ಗೌರವಿಸುತ್ತಿದ್ದರು.

ಆ ಸಮಯದಲ್ಲಿ ಕಂಚಿಯಲ್ಲಿ ಶ್ರೀ **ಕಾಂಚೀಪೂರ್ಣ**ರೆಂಬ ಭಗವದ್ಭಕ್ತರು ಭಕ್ತ ಶಿರೋಮಣಿಯೆಂದು ಹೆಸರುಗಳಿಸಿದ್ದರು. ಅವರು ನಿತ್ಯವೂ ಕಂಚಿಯಿಂದ ಪೂನಮಲೆಯಲ್ಲಿದ್ದ ಸ್ವಾಮಿಯ ಆರಾಧನೆಗಾಗಿ ಬಂದು ಹೋಗುತ್ತಿದ್ದರು. ಶ್ರೀ ಪೆರಂಬುದೂರು ಮಧ್ಯೆ ಸಿಗುತ್ತಿತ್ತು. ಅವರು ನಿತ್ಯವೂ ರಾಮಾನುಜರ ಮನೆಯ ಮುಂಭಾಗದಲ್ಲೇ ಹೋಗುತ್ತಿದ್ದರು. ಜಾತಿಯಲ್ಲಿ ಶೂದ್ರರಾದರೂ, ಅವರಲ್ಲಿರುವ ದೈವಭಕ್ತಿಯನ್ನು ನೋಡಿ ಬ್ರಾಹ್ಮಣರು ಅವರನ್ನು ಬಹಳವಾಗಿ ಗೌರವಿಸುತ್ತಿದ್ದರು.

ಒಂದು ದಿನ ಸಂಜೆ ರಾಮಾನುಜರು ತಮ್ಮ ಗುರುಗಳ ಮನೆಯಿಂದ ಹಿಂದಿರುಗುವಾಗ ಈ ದೈವಪುರುಷನನ್ನು ನೋಡಿ, ಅವರ ಮುಖದ ಮೇಲಿನ ದೈವಕಾಂತಿಯನ್ನು ನೋಡಿ ಕಾಂಚೀಪೂರ್ಣರಿಗೆ ಮಾರು ಹೋದರು. ಆ ರಾತ್ರಿ ತಮ್ಮ ಮನೆಗೆ ಊಟಕ್ಕೆ ಬರಬೇಕೆಂದು ಭಕ್ತಿಯಿಂದ ಬೇಡಿಕೊಂಡರು.

ಕಾಂಚೀಪೂರ್ಣರು ಸಹ ಹುಡುಗನ ಅಲೌಕಿಕ ಸೌಂದರ್ಯ ಹಾಗೂ ದೈವಿಕ ಚಿಹ್ನೆಗಳನ್ನು ನೋಡಿ ರಾಮಾನುಜರ ಬೇಡಿಕೆಯನ್ನು ತಳ್ಳಿ ಹಾಕಲಾಗಲಿಲ್ಲ.

ಕಾಂಚೀಪೂರ್ಣರು ತಮ್ಮ ಅತಿಥಿಯಾಗಿ ಬಂದದ್ದನ್ನು ನೋಡಿ ಬಹಳ ಸಂತೋಷಪಟ್ಟರು. ಕಾಂಚೀಪೂರ್ಣರ ಊಟವಾದ ಮೇಲೆ ರಾಮಾನುಜರು ಕಾಂಚೀಪೂರ್ಣರ ಕಾಲುಗಳನ್ನು ಒತ್ತಲು ಮುಂದೆ ಬಂದರು.

ಕಾಂಚೀಪೂರ್ಣರು ನಿರಾಕರಿಸಿದರು "ನಾನು ಶೂದ್ರ ನೀನು ದೇವರು. ನಿನ್ನ ಸೇವಕನನ್ನೇ ಸೇವಿಸುವುದು ಹೇಗೆ?" ರಾಮಾನುಜರು, "ತಮ್ಮಂತಹ ಪೂಜ್ಯರ ಸೇವೆ ಮಾಡಲು ಅವಕಾಶ ಕೊಡದಿದ್ದಕ್ಕಾಗಿ ವಿಷಾದಿಸುತ್ತೇನೆ. ಇದು ನನ್ನ ದುರಾದೃಷ್ಟವೆಂದು ತಿಳಿಯುತ್ತೇನೆ, ಕೇವಲ ಯಜ್ಞೋಪವೀತವನ್ನು ಧರಿಸಿದ ಮಾತ್ರಕ್ಕೆ ಅವನು ಬ್ರಾಹ್ಮಣನಾಗಲಾರ. ತಮಗೆ ತಿಳಿದಿದೆ, ಕೀಳುಜಾತಿಯ ತಿರುಪ್ಪಾಣಾಳ್ವಾರರನ್ನು ಬ್ರಾಹ್ಮಣರು ಎಷ್ಟರ ಮಟ್ಟಿಗೆ ಪೂಜಿಸಿದರೆಂದು".

ಆ ರಾತ್ರಿ ಇಬ್ಬರ ಮಧ್ಯೆ ಆಧ್ಯಾತ್ಮಿಕ ವಿಷಯಗಳ ಬಗ್ಗೆ ಬಹಳ ಹೊತ್ತು ಸಂಭಾಷಣೆ ನಡೆಯಿತು. ಕಾಂಚೀಪೂರ್ಣರು ರಾಮಾನುಜರ ಮನೆಯಲ್ಲೇ ತಂಗಿದ್ದರು. ಬೆಳಗ್ಗೆ ಸ್ವಸ್ಥಾನಕ್ಕೆ ತೆರಳಿದರು.

ಅಂದಿನಿಂದ ಈ ಇಬ್ಬರು ಮಹಾತ್ಮರ ಮಧ್ಯೆ ನಿಕಟ ಪ್ರೇಮ ಬೆಳೆಯಿತು.

ರಾಮಾಯಣದಲ್ಲಿ ಲಕ್ಷ್ಮಣ ತನ್ನ ಅಣ್ಣ ಶ್ರೀ ರಾಮಚಂದ್ರನನ್ನು ಪರಮ ಪುರುಷನೆಂದು, ಸೀತಾದೇವಿಯನ್ನು ಮಾತೆಯೆಂದು ಭಾವಿಸಿ, ತನ್ನ ಸ್ವಾರ್ಥವನ್ನು ಬದಿಗೊತ್ತಿ ಸತತವೂ ಅವರ ಸೇವೆಯಲ್ಲಿ ನಿರತನಾಗಿ ಧನ್ಯನಾದನೋ. ಹಾಗೆಯೇ ಶ್ರೀ ರಾಮಾನುಜರು ಶ್ರೀ ಮನ್ನಾರಾಯಣನ ಸೇವೆಗಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟರು. ಜನರಲ್ಲಿ, ದೇವರಲ್ಲಿ ಅನನ್ಯ ಭಕ್ತಿ ಮೂಡುವಂತೆ ಮಾಡಿದರು. ಭಕ್ತಿಯೆಂಬ ಸೀತಾಮಾತೆಯನ್ನು ನಾಸ್ತಿಕರು ಅಪಹರಿಸಿದ್ದರು. ಆ ಭಕ್ತಿಮಾತೆಯನ್ನು ಹಿಂದಕ್ಕೆ ಕರೆತಂದು ಶ್ರೀ (ಲಕ್ಷ್ಮಿ)ಯನ್ನು ನಾರಾಯಣನ ಪಕ್ಕದಲ್ಲಿ ಕೂಡಿಸಿದರು. ಹೀಗೆ ರಾಮಾನುಜರು **ಶ್ರೀ ಸಂಪ್ರದಾಯದ** ಸಂಸ್ಥಾಪಕರಾದರು.

— ❋ —

# 2

## ಯಾದವ ಪ್ರಕಾಶರು

ಶ್ರೀ ರಾಮಾನುಜರ ಹದಿನಾರನೇ ವಯಸ್ಸಿನಲ್ಲಿ ಶ್ರೀಮದ್ ಆಸೂರೀಕೇಶವಾಚಾರ್ಯರು ಒಳ್ಳೆಯ ಗುಣವಂತೆ ಹಾಗೂ ಸುಂದರಳಾದ ಕನ್ಯೆಯನ್ನು ಹುಡುಕಿ, ಮದುವೆ ಮಾಡಿದರು. ನೂತನ ಸುಂದರ ದಂಪತಿಗಳನ್ನು ನೋಡಿ ತಾಯಿತಂದೆಯರು ಬಹಳ ಸಂತೋಷಪಟ್ಟರು.

ಆದರೆ ಈ ಸಂತೋಷ ದೀರ್ಘಕಾಲ ಇರಲಾಗಲಿಲ್ಲ. ದಾರುಣ ರೋಗದಿಂದ ಆಚಾರ್ಯರು ಅಸುನೀಗಿದರು.

ಕಾಂತಿಮತಿಗೆ ತನ್ನ ಪತಿದೇವರನ್ನು ಕಳೆದುಕೊಂಡು ಅತೀವ ದುಃಖವುಂಟಾಯಿತು.

ರಾಮಾನುಜರೂ ಸಹ ಕೊಂಚಕಾಲ ಶೋಕಕ್ಕೆ ಒಳಗಾದರು. ಆದರೆ ತಮ್ಮ ಆಧ್ಯಾತ್ಮಿಕ ಜ್ಞಾನದಿಂದಾಗಿ ಆ ಪಿತೃಶೋಕವನ್ನು ದೂರಮಾಡಿದರು. ತನ್ನ ತಾಯಿಯನ್ನು ಸಹ ಸಂತೈಸತೊಡಗಿದರು.

ತನ್ನ ತಂದೆಯ ಉತ್ತರ ಕ್ರಿಯಾದಿಗಳ ನಂತರ ಶ್ರೀ ಪೆರಂಬುದೂರಿನಲ್ಲಿ ತಾಯಿಗೆ, ಮಗನಿಗೆ ನೆಮ್ಮದಿ ಸಿಗಲಿಲ್ಲ. ಆದ್ದರಿಂದ ತಮ್ಮ ನಿವಾಸ ಸ್ಥಾನವನ್ನು ಕಾಂಚೀಪುರಕ್ಕೆ ಬದಲಾಯಿಸಿದರು. ಅಲ್ಲಿ ಒಂದು ಮನೆಯನ್ನು ಕಟ್ಟಿಸಿ, ಕುಟುಂಬ ಸಹಿತ ವಾಸಕ್ಕೆ ಅಲ್ಲಿಗೆ ಹೋದರು.

ಆ ಸಮಯದಲ್ಲಿ ಕಾಂಚೀಪುರದ **ಯಾದವ ಪ್ರಕಾಶರೆಂಬ** ಹೆಸರಾಂತ ಅದ್ವೈತ ಪಂಡಿತರಿದ್ದರು. ಅವರ ವಿದ್ವತ್ತು ಎಲ್ಲರನ್ನೂ ಸೆರೆ ಹಿಡಿದಿತ್ತು. ಅನೇಕರು ಅವರ ಶಿಷ್ಯರಾಗಿದ್ದರು.

ಜ್ಞಾನ ಪಿಪಾಸೆಯಿಂದಾಗಿ ರಾಮಾನುಜರೂ ಯಾದವ ಪ್ರಕಾಶರ ಶಿಷ್ಯರಾದರು. ಸ್ವಲ್ಪವೇ ಸಮಯದಲ್ಲಿ ರಾಮಾನುಜರು ಅವರ ಜಾಣ್ಮೆಯಿಂದಾಗಿ ಯಾದವ ಪ್ರಕಾಶರ ಮುಖ್ಯ ಶಿಷ್ಯರಾದರು.

ಯಾದವ ಪ್ರಕಾಶರು ಪ್ರಚಾರ ಮಾಡಿದ ಅದ್ವೈತ ಸಿದ್ಧಾಂತವು ಈಗಲೂ **"ಯಾದವೀಯ ಸಿದ್ಧಾಂತ"** ವೆಂಬ ಹೆಸರಿನಲ್ಲಿ ಪ್ರಸಿದ್ಧವಾಗಿದೆ.

ಯಾದವರು ಶುದ್ಧಾದ್ವೈತವಾದಿಗಳಾಗಿದ್ದರು. ಅವರ ಸಿದ್ಧಾಂತದ ಪ್ರಕಾರ ದೇವರಿಗೆ ರೂಪವಿಲ್ಲ. ರೂಪವಿರುವ ಜಗತ್ತು ಅವನದ್ದೇ. ಆದರೆ ಅದು ಪರಿವರ್ತನೆಯುಳ್ಳದ್ದು ಕ್ಷಣಭಂಗುರವಾದದ್ದು. ಆದರೆ ಆ ಅವಿನಾಶ ಸತ್ಯ ಸ್ವಯಂ ಪರಿಪೂರ್ಣ, ಸಚ್ಚಿದಾನಂದ. ಕಾರಣ ಕಾಲ, ದೇಶಗಳಿಗೆ ಹೊರತಾದ್ದು. ಅದು ವಿಶ್ವರೂಪಿನ ಹಿಂದೆ ಆಧಾರವಾಗಿರುತ್ತದೆ. ಇದೇ ಅವನ ಅಂತಿಮ ಪರಮ ಸತ್ಯ. ಈ ಸತ್ಯವನ್ನೇ ನಾವು ತಿಳಿಯಬೇಕಾದುದು ಹಾಗೂ ಒಪ್ಪಬೇಕಾದುದು.

ಶಂಕರಾಚಾರ್ಯರಂತೆ ಯಾದವರು'**ವಿರಾಟ್**'ಪುರುಷನನ್ನು ಮಾಯೆಯೆಂದಾಗಲಿ ಅಥವಾ ಅಜ್ಞಾನದಿಂದ ಕಾಣುವ ಮಿಥ್ಯಾರೂಪವೆಂದಾಗಲಿ ಅಥವಾ'**ವಿವರ್ತ**' ಹಗ್ಗವು ಹಾವಾಗಿ ಕಾಣುವ ಪರಿವರ್ತನೆಯೆಂದಾಗಲಿ ಒಪ್ಪುತ್ತಿರಲಿಲ್ಲ.

'ವಿರಾಟ್' ನೋಡುವ ಆತ್ಮವೇ ಜೀವ. 'ಸ್ವರಾಟ್' ಸ್ವಯಂ ಪ್ರಕಾಶವುಳ್ಳ ಆತ್ಮವೇ ಬ್ರಹ್ಮ ಇದೇ ಅವರ ಸಿದ್ಧಾಂತದ ತಿರುಳಾಗಿತ್ತು.

ಆದರೆ ರಾಮಾನುಜರು ಪರಿಪೂರ್ಣಭಕ್ತಿಯ ಹಾಗೂ ದೇವರತ್ತ ದಾಸ್ಯ ವೃತ್ತಿಯ ಮಾನವೀಕರಣದ ಪ್ರತೀಕವಾಗಿದ್ದರು. ಆದ ಕಾರಣ ಯಾದವರ ಸಿದ್ಧಾಂತ ರಾಮಾನುಜರಿಗೆ ಸರಿದೋರಲಿಲ್ಲ.

ಒಮ್ಮೆ ಯಾದವ ಪ್ರಕಾಶರು ಮೈಗೆ ಎಣ್ಣೆ ಹಚ್ಚುವಂತೆ ರಾಮಾನುಜರಿಗೆ ತಿಳಿಸಿದರು. ಅದೇ ಸಮಯದಲ್ಲಿ ಒಬ್ಬ ಶಿಷ್ಯ ಗುರುಗಳಲ್ಲಿಗೆ ಬಂದು ಛಾಂದೋಗ್ಯ ಉಪನಿಷತ್ತಿನ ಸೂಕ್ತಿ"**ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ**"ಯಲ್ಲಿ'**ಕಪ್ಯಾಸಂ**' ಎಂಬ ಪದದ ಅರ್ಥ ಸರಿಯಾಗಿ ತಿಳಿಯಲಿಲ್ಲವೆಂದು ಪುನಃ ಅರ್ಥ ಸ್ಪಷ್ಟಪಡಿಸಿರೆಂದು ಕೇಳಿಕೊಂಡನು.

ಯಾದವರು ಆ ಪದಕ್ಕೆ ಈ ರೀತಿ ಅರ್ಥವೆಂದು ತಿಳಿಸುತ್ತಾ ಹೇಳಿದರು– **"ಆ ಬಂಗಾರಪುರುಷನ ಎರಡು ಕಣ್ಣುಗಳು ಕಮಲದಂತಿದ್ದವು. ಕಮಲಗಳ ಬಣ್ಣ ಕಪಿಯ ನಿತಂಬದಂತೆ ಕೆಂಪಾಗಿತ್ತು"** ಎಂದು ವಿವರಿಸಿದರು.

ಯಾದವ ಪ್ರಕಾಶರ ಈ ವಿವರಣೆಯನ್ನು ಕೇಳಿ ರಾಮಾನುಜರು ನಸುನಕ್ಕರು. ಆದರೆ ಅವರ ಭಕ್ತಿ ಕಣ್ಣೀರಾಗಿ ಹರಿಯಿತು.

ಯಾದವರು ರಾಮಾನುಜರ ಕಣ್ಣೀರನ್ನು ಕಂಡು ಪ್ರೀತಿಯಿಂದ "ಎಲೈ ಮಗುವೆ, ಏಕೆ ಕಣ್ಣೀರು?"

**ರಾಮಾನುಜರು:** ಪೂಜ್ಯರೇ, ತಮ್ಮ ವಿವರಣೆಯನ್ನು ಕೇಳಿ ಬಹಳ ದುಃಖವಾಯಿತು. ನಮ್ಮೆಲ್ಲರನ್ನೂ, ಏಕೆ ವಿಶ್ವವನ್ನೇ ರಕ್ಷಿಸುವ ಅಪ್ರತಿಮ ಸೌಂದರ್ಯಮೂರ್ತಿ ಎಲ್ಲಿ? ಕಪಿಯ ನಿತಂಬವೆಲ್ಲಿ? ಜ್ಞಾನಿಗಳಾದ ತಮ್ಮ ಬಾಯಲ್ಲಿ ಇಂತಹ ಕ್ಷುಲ್ಲಕ ಮಾತುಗಳು ಬರಬಾರದು.

**ಯಾದವರು:** ನೀನು ಇದಕ್ಕೆ ಬೇರೆ ರೀತಿಯ ವಿವರಣೆಯನ್ನು ಕೊಡಬಲ್ಲೆಯಾ?

**ರಾಮಾನುಜರು:** ತಾವು ಅಪ್ಪಣೆ ಕೊಟ್ಟರೆ ಕೊಡಬಲ್ಲೆ.

**ಯಾದವರು:** ಆಯ್ತು. ನಿನ್ನ ವರ್ತನೆಯನ್ನು ನೋಡಿದರೆ ನನ್ನನ್ನೂ ಮೀರಿಸುವಂತಿದೆ. ಎಲ್ಲಿ, ನಿನ್ನ ನಿರೂಪಣೆಯನ್ನು ತಿಳಿಸು ನೋಡೋಣ.

**ರಾಮಾನುಜರು:** ಪೂಜ್ಯರೇ, ತಮ್ಮ ಆಶೀರ್ವಾದವಿದ್ದರೆ, ಎಲ್ಲವೂ ಸಾಧ್ಯ. ಈಗ ತಾವು 'ಕಪ್ಯಾಸಂ' ಎಂಬ ಪದಕ್ಕೆ ನೀಡಿರುವ ಅರ್ಥಸರಿಯಲ್ಲವೆಂದು ನನ್ನ ಭಾವನೆ

**ಯಾದವರು:** ಅದು ಹೇಗೆ?

**ರಾಮಾನುಜರು:** ಆ ಶಬ್ದಕ್ಕೆ ಕಪಿಯ ನಿತಂಬವೆಂಬ ನೀಚ ಅರ್ಥವನ್ನು ಕೊಡುವ ಬದಲು **ಕಂಜಲಂ ಪಿಬತೀತಿ-ಕಪಿ;** ಅಂದರೆ ಯಾವನು ಜಲವನ್ನು ಕುಡಿಯುತ್ತಾನೋ ಅವನು, ಅಂದರೆ ಸೂರ್ಯ, **ಆಸ್** ಎಂಬ ಕ್ರಿಯಾಪದಕ್ಕೆ ಹೂಗಳ ಅರಳುವಿಕೆ. ಅಂದಮೇಲೆ ಆ ವಾಕ್ಯದ ಪೂರ್ಣ ಅರ್ಥ ಪುರುಷನ ನೇತ್ರಗಳು. ಸೂರ್ಯನ ಕಿರಣ ಸ್ಪರ್ಶದಿಂದ ಅರಳಿದ ಕಮಲಗಳಂತಿದ್ದವು.

**ಯಾದವರು:** ಇದು ನೇರವಾದ ಅರ್ಥವಲ್ಲ. ತಿರುವು-ಮುರುವಿನಿಂದ ಕಲ್ಪಿಸಿದ ಅರ್ಥ. ಇದು ಕೇವಲ ನಿನ್ನ ಚಮತ್ಕಾರ.

ಈ ಘಟನೆಯ ನಂತರ ಯಾದವರು ರಾಮಾನುಜರನ್ನು ಪಕ್ಕಾದ್ವೈತವಾದಿ ಎಂದು ತಿಳಿದರು. ಅಂದಿನಿಂದ ಯಾದವರ ಪ್ರೇಮ ರಾಮಾನುಜರಲ್ಲಿ ಕುಸಿಯ ತೊಡಗಿತು.

ಮತ್ತೊಂದು ದಿನ ತೈತ್ತಿರೀಯ ಉಪನಿಷತ್ತಿನ ಮಂತ್ರದಲ್ಲಿ**ಸತ್ಯಂ ಜ್ಞಾನಂ ಅನಂತಂ ಬ್ರಹ್ಮ** ಎಂಬುದಕ್ಕೆ ಯಾದವ ಪ್ರಕಾಶರು ಈ ರೀತಿ ಅರ್ಥವನ್ನು ಕೊಟ್ಟರು.

## ಬ್ರಹ್ಮನೇ ಸತ್ಯ, ಜ್ಞಾನ, ಅನಂತ

ರಾಮಾನುಜರು ಇದನ್ನೂ ಸಹ ವಿರೋಧಿಸಿದರು. ಅವರು ಈ ರೀತಿ ವಿವರಣೆ ಕೊಟ್ಟರು-ಇವುಗಳು ಬ್ರಹ್ಮನಲ್ಲಿರುವ ಗುಣಗಳು ಮಾತ್ರ. ಈ ಗುಣಗಳೇ ಬ್ರಹ್ಮನಲ್ಲ. ಅವನಲ್ಲಿ ಸತ್ಯವಿದೆ, ಅಸತ್ಯವಿಲ್ಲ, ಅವನಲ್ಲಿ ಜ್ಞಾನವಿದೆ, ಅಜ್ಞಾನವಿಲ್ಲ, ಅವನಲ್ಲಿ ಅನಂತತೆ ಇದೆ, ಸೀಮಿತಗುಣವಿಲ್ಲ, ಯಾವುದೇ ಕಾರಣಕ್ಕೂ ಈ ಗುಣಗಳೆಲ್ಲಾ ಅವನೇ ಎಂದು ಭಾವಿಸಬಾರದು; ಇವು ಅವನಲ್ಲಿರುವ ಗುಣಗಳು ಮಾತ್ರ. ಶರೀರ ನನ್ನದೇ ಹೊರತು, ಶರೀರವೇ ನಾನಲ್ಲ.

ರಾಮಾನುಜರ ಈ ಮಾತುಗಳನ್ನು ಕೇಳಿ ಯಾದವರಿಗೆ ಅತ್ಯಂತ ಕೋಪವುಂಟಾಯಿತು.

### ರಾಗ-ಅಠಾಣ

ಕಂದ: ಪೋರನೆಲೊ ಶಠನೆ ನಿನ್ನಯ
ಹುರುಳಿಲ್ಲದ ಪರಟೆಯನಾರು ಕೇಳ್ವರಿಲ್ಲಂ
ಗುರುವಾದೆನ್ನಯ ನುಡಿಗಳ
ನರಿವಮನವಿಲ್ಲದೊಡೆ ತ್ಯಜಿಸೀತಾಣವಂ ॥

ನನ್ನ ಮಾತಿಗೆ ಬೆಲೆ ಕೊಡದಿದ್ದರೆ ಇಲ್ಲಿಂದ ತೊಲಗು ಎಂದು ಗರ್ಜಿಸಿದರು.

ರಾಮಾನುಜರಲ್ಲಿ ಗುರುಗಳ ಮಾತುಗಳನ್ನು ನಿರಾಕರಿಸುವ ಉದ್ಧಟತನವಿರಲಿಲ್ಲ. ಆದರೆ ಸತ್ಯಕ್ಕೆ ಧಕ್ಕೆ ಬರುವುದಾದರೆ ಅದನ್ನು ಸಹಿಸುತ್ತಿರಲಿಲ್ಲ. ಸತ್ಯವೇ ಅವರ ನಿಜವಾದ ಜೀವನವಾಗಿತ್ತು.

ಇತರ ಶಿಷ್ಯರ ಮಧ್ಯೆ ರಾಮಾನುಜರು ಯಾದವರ ತೇಜೋವಧೆ ಮಾಡಿದ್ದು ಯಾದವರಲ್ಲಿ ರಾಮಾನುಜರ ಬಗ್ಗೆ ಅಸೂಯೆ ಉಂಟುಮಾಡಿತು. ಯಾದವರು ಯೋಚಿಸಿದರು – ಈ ಹುಡುಗ ಮುಂದೆ ಅದ್ವೈತ ಸಿದ್ಧಾಂತಕ್ಕೆ ಧಕ್ಕೆ ತರುತ್ತಾನೆ; ಒಂದು ಬಗೆಯ ದ್ವೈತವನ್ನು ಬೆಳಕಿಗೆ ತರುತ್ತಾನೆ. ಅಂದ ಮೇಲೆ ಅದ್ವೈತದ ಉದ್ಧಾರಕ್ಕೆ ಕಂಟಕಪ್ರಾಯನಾಗಿರುವ ರಾಮಾನುಜನನ್ನು ಮುಗಿಸಲೇಬೇಕು.

ಅದ್ವೈತವನ್ನುದ್ಧರಿಸ ಬೇಕೆಂಬುದು ಒಂದು ಸೋಗು ಮಾತ್ರ, ಆದರೆ ಹಿನ್ನೆಲೆಯಲ್ಲಿ, ನಾನು ಮಹಾನ್ ವ್ಯಕ್ತಿ, ನನಗೆ ಸದೃಶರಾದವರು ಯಾರಿದ್ದಾರೆ ಎಂಬ ಅಹಂಕಾರ ಯಾದವ ಪ್ರಕಾಶರಲ್ಲಿ ತುಂಬಿತ್ತು. ಆದ ಕಾರಣ ರಾಮಾನುಜರ ಪ್ರಗತಿಯನ್ನು ನೋಡಿ ಕರುಬಿದರು. ಈ ಕಾರಣದಿಂದಲಾದರೂ ರಾಮಾನುಜರನ್ನು ಕೊಲ್ಲುವ ಪ್ರಯತ್ನ ನಡೆಸಬೇಕೆಂದು ಸಂಕಲ್ಪಿಸಿದರು.

ಯಾದವ ಪ್ರಕಾಶರು ತನ್ನ ಇತರೆ ಶಿಷ್ಯರೊಂದಿಗೆ ಗುಪ್ತಾಲೋಚನೆ ನಡೆಸಿ ಒಂದು ತೀರ್ಮಾನಕ್ಕೆ ಬಂದರು.

**ಯಾದವರು:** ಎಲೈ ಶಿಷ್ಯರೇ, ನಾವೆಲ್ಲಾ ಪಾಪ ಪರಿಹಾರಾರ್ಥವಾಗಿ ಗಂಗಾಯಾತ್ರೆಯನ್ನು ಕೈಗೊಳ್ಳೋಣ. ನೀವು ರಾಮಾನುಜನ ಮನವೊಲಿಸಿ, ಜೊತೆಯಲ್ಲಿ ಕರೆತನ್ನಿ. ಅಲ್ಲಿ ಆತನನ್ನು ಮುಗಿಸಿ, ಬ್ರಹ್ಮಹತ್ಯ ದೋಷವನ್ನು ಭಾಗೀರಥಿಯಲ್ಲಿ ಮುಳುಗಿ ಪರಿಹರಿಸಿಕೊಂಡು ಹಿಂದಿರುಗೋಣ.

ಯಾದವ ಪ್ರಕಾಶರ ಶಿಷ್ಯರು ರಾಮಾನುಜರ ಬಳಿ ಬಂದು ಯಾತ್ರೆಗೆ ಹೊರಡುವಂತೆ ಪ್ರೇರೇಪಿಸಿದರು. ಅವರು ಒಪ್ಪಿಗೆ ಕೊಟ್ಟರು.

ಈ ವಿಷಯವನ್ನು ರಾಮಾನುಜರು ತಮ್ಮ ಚಿಕ್ಕಮ್ಮನ ಮಗನಾದ ಗೋವಿಂದನಿಗೆ ತಿಳಿಸಿದರು. ಗೋವಿಂದನು ರಾಮಾನುಜರೊಂದಿಗೆ ಬಾಳ್ವೆ ನಡೆಸುತ್ತಿದ್ದನು. ಆದ ಕಾರಣ ಗೋವಿಂದನೂ ಸಹ ರಾಮಾನುಜರ ಜೊತೆ ಹೊರಡಲು ಸಿದ್ಧನಾದನು.

ಯಾದವ ಪ್ರಕಾಶರೊಂದಿಗೆ ಶಿಷ್ಯರೆಲ್ಲರೂ, ರಾಮಾನುಜರು ಮತ್ತು ಗೋವಿಂದರೊಡಗೂಡಿ ತೀರ್ಥಯಾತ್ರೆ ಮಾಡುತ್ತಾ ವಿಂಧ್ಯ ಪರ್ವತ ಶ್ರೇಣಿಯ ತಪ್ಪಲಿನಲ್ಲಿದ್ದ ಗೋಂಡಾರಣ್ಯವನ್ನು ತಲುಪಿದರು. ಆ ನಿರ್ಜನ ಪ್ರದೇಶವನ್ನು ನೋಡಿ ತನ್ನ ಶಿಷ್ಯರಿಗೆ ಆಕ್ರೂರ ಕೃತ್ಯವನ್ನೆಸಗಲು ಸಿದ್ಧರಾಗಿರೆಂದು ಸೂಚಿಸಿದರು.

ಸರಳ ಸ್ವಭಾವದ ರಾಮಾನುಜರಿಗೆ ಈ ರಾಕ್ಷಸ ಕೃತ್ಯದ ಅರಿವೇ ಇರಲಿಲ್ಲ. ಆದರೆ ಗೋವಿಂದನಿಗೆ ಹೇಗೋ ಈ ವಿಷಯ ತಿಳಿಯಿತು.

ಒಂದು ದಿನ ರಾಮಾನುಜರು ಮತ್ತು ಗೋವಿಂದ ಇಬ್ಬರೇ ಕೈಕಾಲುಗಳನ್ನು ತೊಳೆದುಕೊಂಡು ಬರಲು ದಾರಿಯಲ್ಲಿದ್ದ ಕೊಳದಬಳಿ ಹೋದಾಗ ಗೋವಿಂದ ಗುಟ್ಟಾಗಿ ರಾಮಾನುಜರಿಗೆ ಈ ವಿಷಯ ತಿಳಿಸಿ, ನೀವು ಕೂಡಲೇ ತಲೆಮರಸಿಕೊಂಡು ಎಲ್ಲಾದರೂ ಹೊರಟು ಹೋಗಿ ಎಂದು ತಿಳಿಸಿದನು. ಕೂಡಲೇ ರಾಮಾನುಜರನ್ನು ಬೇರೆ ಕಡೆಗೆ ಕಳುಹಿಸಿಕೊಟ್ಟು ಗೋವಿಂದ ತಾನೊಬ್ಬನೇ ಯಾದವರ ಗುಂಪನ್ನು ಸೇರಿದನು.

ಬಹಳ ಹೊತ್ತಿನ ಮೇಲೆ ಯಾದವರೂ ಸೇರಿದಂತೆ ಎಲ್ಲರೂ ರಾಮಾನುಜರನ್ನು ಹುಡುಕಿದರು. ಅವರ ಪತ್ತೆ ಆಗಲಿಲ್ಲ. ರಾಮಾನುಜರು ಯಾವುದೋ ಮೃಗದ ಬಾಯಿಗೆ ಸಿಕ್ಕಿ ಅಸುನೀಗಿದ್ದಾರೆಂದು ಅವರು ತಿಳಿದುಕೊಂಡರು.

ಗೋವಿಂದನು ರಾಮಾನುಜರ ಬಂಧುವೆಂದು ತಿಳಿದು, ಎಲ್ಲರೂ ಆತನನು ಸಂತೈಸಿದರು.

ಯಾದವ ಪ್ರಕಾಶರು ತಮ್ಮ ಅಸೂಯೆಯಿಂದಾಗಿ ಮೃಗಕ್ಕೂ ಕಡೆಯಾದರು.

— ❋ —

# 3

# ವ್ಯಾಧ ದಂಪತಿಗಳು

ಗೋವಿಂದನು ರಾಮಾನುಜರನ್ನು ಒಬ್ಬರನ್ನೇ ಬಿಟ್ಟು ಹೊರಟುಹೋದನು. ರಾಮಾನುಜರಿಗೆ ದಿಕ್ಕು ಕಾಣದಾಯ್ತು. ಈ ಅರಣ್ಯದಲ್ಲಿ ಎಲ್ಲಿಗೆ ಹೋಗುವುದು? ಏನು ಮಾಡುವುದು? ಒಂದೂ ಗೊತ್ತಾಗಲಿಲ್ಲ. ಆ ವೇಳೆಗೆ ರಾತ್ರಿ ಸಮೀಪಿಸುತ್ತ ಬಂದಿತು.

ಆ ವೇಳೆಯಲ್ಲಿ ಅದೃಶ್ಯ ಶಕ್ತಿಯೊಂದು ಅವರನ್ನು ಆವರಿಸಿತು. ಭಯವೇಕೆ? ಭಗವಾನ್ ನಾರಾಯಣನಿದ್ದಾನೆ ಎಂದು ತಿಳಿದು ಆ ಘೋರಾರಣ್ಯದಲ್ಲಿ ದಕ್ಷಿಣ ದಿಕ್ಕಿಗೆ ಹೊರಟೇ ಬಿಟ್ಟರು.

ವೇಗವಾಗಿ ನಡೆದರು. ಆಯಾಸ ಹೆಚ್ಚಾಯಿತು. ಹಸಿವು ತೃಷೆಗಳು ಹೆಚ್ಚಾದವು. ಒಂದು ಹೆಜ್ಜೆ ಮುಂದಿಡಲೂ ಸಹ ಸಾಧ್ಯವಾಗಲಿಲ್ಲ. ಆಗ ಅಲ್ಲಿ ಒಂದು ಮರ, ಅದರ ಕೆಳಗೆ ಪ್ರಪಂಚವನ್ನೇ ಮರೆತು ಮಲಗಿದರು.

ಅವರಿಗೆ ಎಚ್ಚರವಾದಾಗ ಮಧ್ಯಾಹ್ನ ಕಳೆದಿತ್ತು. ಮುಂದೆಲ್ಲಿಗೆ ಹೋಗುವುದೆಂದು ಯೋಚಿಸುತ್ತಾ ಕುಳಿತಿದ್ದರು.

**ಲಚ್ಚಿ:** ಒಡೆಯ, ಅಲ್ನೋಡು, ಅದ್ಯಾರೋ ತಲೆ ಮೇಲ್ ಕೈಯೊತ್ಕೂತಾರಾ? ಅಲ್ಹೋಗಿ ಕೇಳ್ವಬಾ.

**ವ್ಯಾಧ:** ನಾವದ್ಕ ಅಲ್ವಾಬಂದಿರೋದು. ನಡಿ ಹೋಗೋವ.

**ಲಚ್ಚಿ:** ಮಗಾ, ಈಕಾಡ್ನಲ್ಲಿ ನೀನೊಬ್ನೆಕೂತ್ಯಲ್ಲ, ಯಾಕೆ? ದಾರಿತಪ್ತಾ? ನೀನು ಬ್ರಾಮ್ರ ಮಗ ಅಂಗೆಕಾಣ್ತೆ. ಎಲ್ಲದ ನಿನ್ಮನೆ?

**ರಾಮಾನುಜರು:** ನನ್ನ ಮನೆ ಬಹಳ ದೂರವಿದೆ. ದಕ್ಷಿಣದಲ್ಲಿ ಕಾಂಚೀಪುರ ಎಂಬ ಹೆಸರನ್ನು ಕೇಳಿದ್ದೀರಾ?

**ವ್ಯಾಧ:** ನೀನೊಬ್ನೆ ಈ ಕಾಡ್ಗೆಯಾಕ್ಬಂದೆ? ಈಕಾಡ್ನಾಗ ತುಂಬಾ ಕಳ್ಳ್ರದಾರ. ಬಯಂಕರ ಪ್ರಾಣಿಗ್ಳವೆ. ನಮ್ಗೆ ಕಾಂಚೀಪುರಗೊತ್ತು. ನಾವು ಅಲ್ಗೇ ಹೋಗ್ತೀವಿ.

**ರಾಮಾನುಜರು:** ನಿಮ್ಮ ಊರು ಎಲ್ಲಿದೆ? ಏತಕ್ಕಾಗಿ ಕಾಂಚೀಪುರಕ್ಕೆ ಹೋಗುತ್ತೀರಿ?

**ವ್ಯಾಧ:** ನಾವು ಕಾಡ್ನಲ್ಲೇ ಬೇಡ್ರಾಗಿ ಇದ್ದೀವಿ. ನಮ್ಗೆ ಒಳ್ಳೆದಾಗ್ಲಂತ ಯಾತ್ರೆ ಹೊರಟೀವಿ. ನಾವು ಕಂಚಿ ಮೇಲೆ ರಾಮೇಶ್ವರಕ್ಕೆ ಹೋಗ್ಬೇಕ. ನಿನ್ನಂತ ಸಿನೇತ ಸಿಕ್ಕಿದ್ದಿಯಲ್ಲಾ ಅದೇ ನಮ್ ಪುಣ್ಯ. ನಿನ್ಗೆ ರಕ್ಷಣೆ ಕೊಡ್ಬೇಕಂತ ಆ ನಾರಾಯಣ ಕಳ್ಸವ್ನಾ. ಎದರ್ಬೇಡ. ಅಲ್ಲೊಂದು ನದೀಐತೆ, ಬೇಗ ಹೋಗ್ವಾನಡೆ.

ಎಲ್ಲರೂ ಅಲ್ಲಿಯೇ ಆ ರಾತ್ರಿಯನ್ನು ಕಳೆದರು. ಬೆಳಗ್ಗೆ ಒಂದು ಬಾವಿಸಿಕ್ಕಿತು. ಆ ಬಾವಿಗೆ ಕೆಳಗೆ ಇಳಿಯಲು ಮೆಟ್ಟಿಲುಗಳಿದ್ದವು. ರಾಮಾನುಜರು ಕೆಳಗೆ ಇಳಿದು ಕೈಕಾಲುಗಳನ್ನು ತೊಳೆದುಕೊಂಡು ಶುದ್ಧನೀರನ್ನು ಕುಡಿದು ದಣಿವನ್ನು ಆರಿಸಿಕೊಂಡರು.

ವ್ಯಾಧನ ಹೆಂಡತಿಯೂ ಸಹ ನೀರು ಬೇಕೆಂದಳು. ರಾಮಾನುಜರೇ ಒಂದು ಬೊಗಸೆ ನೀರನ್ನು ಬಾವಿಯಿಂದ ತೆಗೆದುಕೊಂಡು ಬಂದು ಕುಡಿಸಿದರು. ಪುನಃ ನೀರು ಬೇಕೆಂದಳು. ಅವರು ಪುನಃ ಬಾವಿಗೆ ಇಳಿದರು, ನೀರು ತಂದು ಕೊಟ್ಟರು. ಹೀಗೆ ನಾಲ್ಕನೇ ಸಾರಿ ಬಾವಿಗೆ ಇಳಿದು ಮೇಲೆ ಬರುವಷ್ಟರಲ್ಲಿ ಆ ವ್ಯಾಧ ದಂಪತಿಗಳು ಅದೃಶ್ಯರಾಗಿದ್ದರು. ಅವರು ಮತ್ತಾರೂ ಅಲ್ಲ ಲಕ್ಷ್ಮೀನಾರಾಯಣರು.

ಆ ವೇಳೆಗೆ ಪಕ್ಕದಲ್ಲೇ ಒಂದು ದೇವಸ್ಥಾನದ ಗೋಪುರ ಹಾಗೂ ಮನೆಗಳು ಕಣ್ಣಿಗೆ ಬಿದ್ದವು. ಬಹುಶಃ ಇದು ಯಾವುದೋ ನಗರವಿರಬೇಕೆಂದು ತಿಳಿದು, ಅದೇ ಸಮಯಕ್ಕೆ ಆ ಮಾರ್ಗವಾಗಿ ಹೋಗುತ್ತಿದ್ದ ಒಬ್ಬ ವ್ಯಕ್ತಿಯನ್ನು ರಾಮಾನುಜರು ಕೇಳಿದರು.
**ರಾಮಾನುಜರು:** ಸ್ವಾಮಿ, ಈ ಸ್ಥಳದ ಹೆಸರೇನು? ಪಥಿಕ: ಏಕೆ ನಿಮಗೆ ತಿಳಿಯದೆ? ಇದೇ ಪ್ರಸಿದ್ಧ ಕಂಚಿ. ನಿಮ್ಮ ಪರಿಚಯ ನನಗಿಷ್ಟ ಹಾಗಿದೆ. ನೀವು ಮಹಾತ್ಮ ಯಾದವ ಪ್ರಕಾಶರ ಶಿಷ್ಯರಲ್ಲವೆ? ನೀವು ಕೈಕಾಲುಗಳನ್ನು ತೊಳೆದುಕೊಂಡ ಆ ಬಾವಿಯ ಜಲ

ಬಹಳ ಪವಿತ್ರ. ಅದು ನಮ್ಮ ಶಾರೀರಕ ದುಃಖವನ್ನು ಪರಿಹರಿಸುತ್ತದೆ. ಅದರ ಪಕ್ಕದಲ್ಲೇ ಪವಿತ್ರ ಶಾಲ ವೃಕ್ಷವಿದೆ. ಇಷ್ಟು ತಿಳಿಸಿ ಹೊರಟು ಹೋದನು.

ರಾಮಾನುಜರಿಗೆ ಎಲ್ಲವೂ ಸ್ವಪ್ನದೋಪಾದಿಯಲ್ಲಿ ಕಂಡಂತಾಯಿತು. ಘಾಬರಿಯಿಂದ ಸುತ್ತಲೂ ನೋಡಿದರು. ಆಗ ಅವರನ್ನು ರಕ್ಷಿಸಿದ ವ್ಯಾಧ ದಂಪತಿಗಳು ಬೇರೆಯಾರೂ ಅಲ್ಲ, ಶ್ರೀ ಲಕ್ಷ್ಮೀನಾರಾಯಣರೇ ಎಂಬುದು ಖಚಿತವಾಯಿತು. ತಮ್ಮ ಮೇಲೆ ಅಪಾರ ಕರುಣೆಯನ್ನು ಬೀರಿದ ಲಕ್ಷ್ಮೀನಾರಾಯಣರನ್ನು ಕೊಂಡಾಡುತ್ತಾ ಆನಂದದಿಂದ ಕುಣಿದಾಡಿದರು.

**ರಾಗ-ಆನಂದಭೈರವಿ** **ಆದಿತಾಳ**

ನಾರಾಯಣನಿನ್ನ ನಾಮದ ಸ್ಮರಣೆಯ ।
ಸಾರಾಮೃತವೆನ್ನ ನಾಲಿಗೆಗೆ ಬರಲಿ ॥ಪ॥
ಕೂಡುವಾಗಲಿ ಮತ್ತೆ ನಿಂತಾಡುವಾಗಲಿ ।
ಹಾಡುವಾಗಲಿ ಹರಿದಾಡುವಾಗಲಿ ॥
ಖೋಡಿ ವಿನೋದದಿ ನೋಡದೆ ನಾಬಲು ।
ಮಾಡಿದ ಪಾಪ ಬಿಟ್ಟೋಡಿ ಹೋಗೋಹಾಗೆ ॥೧॥

ಊರಿಗೆ ಹೋಗಲಿ ಊರೊಳಗಿರಲಿ ।
ಕಾರಣಾರ್ಥಂಗಳೆಲ್ಲ ಕಾದಿರಲಿ ॥
ವಾರಿಜನಾಭ ನರಸಾರಥಿಸನ್ನುತ ।
ಸಾರಿಸಾರಿಗೆ ನಾ ಬೇಸರದ್ದಾಗೆ ॥೨॥

ಹಸಿವಿದ್ದಾಗಲಿ ಹಸಿವಿಲ್ಲದಾಗಲಿ ।
ರಸಕಸೀರಲಿ ಪರುಷಿರಲಿ ॥
ವಸುದೇವಾತ್ಮಕ ಶಿಶುಪಾಲಕ್ಷಯ ।
ಅಸುರಾಂತಕ ನಿನ್ನ ಹೆಸರುಮರೆಯದ್ದಾಗೆ ॥೩॥

ಕಷ್ಟದಲ್ಲಿರಲಿ ಉತ್ಕೃಷ್ಟದಲ್ಲಿರಲಿ ।
ಎಷ್ಟಾದರು ಮತಿಗೆಟ್ಟಿರಲಿ ॥
ಕೃಷ್ಣ ಕೃಷ್ಣ ಎಂದು ಶಿಷ್ಟರು ಪೇಳುವ ।
ಅಷ್ಟಾಕ್ಷರ ಮಹಾಮಂತ್ರದ ನಾಮದ ॥೪॥

ಕನಸಿನೊಳಾಗಲಿ ಕಳವಳಿಕಾಗಲಿ ।
ಮನಸುಗೊಟ್ಟಿರಲಿ ಮುನಿದಿರಲಿ ।
ಜನಕಜಾಪತಿ ನಿನ್ನ ಚರಣಕಮಲವನು ।
ಮನಸಿನೊಳಗೆ ಒಮ್ಮೆನೆನೆಸಿಕೊಳ್ಳೋಹಾಗೆ ॥೫॥

ಜ್ವರಬಂದಾಗಲಿ ಚಳಿಬಂದಾಗಲಿ ।
ಮರಳಿಮರಳಿ ಮತ್ತೆ ನಡುಗುವಾಗಲಿ ॥
ಹರಿನಾರಾಯಣ ದುರಿತ ನಿವಾರಣೆಂದು ।
ಇರುಳುಹಗಲು ನಿನ್ನಸ್ಮರಣೆ ಮರೆಯದ್ಹಾಗೆ ॥೬॥

ಸಂತತ ಹರಿ ನಿನ್ನ ಸಾವಿರನಾಮವು ।
ಅಂತರಂಗದ ಒಳಗಿರಿಸಿ ॥
ಎಂತೋಪುರಂದರ ವಿಟ್ಠಲರಾಯನೆ ।
ಅಂತ್ಯಕಾಲದಲ್ಲಿ ಚಿಂತಿಸೋಹಾಗೆ ॥೭॥

— ❋ —

ಧಾಪಿಸಿದರು. ಆದರೆ ಶ್ರೀ ಕಾಂಚೀಪೂರ್ಣರು ಕೂಡಲೇ ಅದಕ್ಕೆ ಅವಕಾಶಕೊಡದೆ ರಾಮಾನುಜರನ್ನು ತಪ್ಪಿಸಿಕೊಂಡು ಬಿಟ್ಟರು. "ನಾನುಧನ್ಯ. ಈಗ ತಾನೇ ಸ್ವಾಮಿನಾರಾಯಣನಿಗೆ ನೈವೇದ್ಯ ಮಾಡಿ ಹೊರಗೆ ಬಂದೆ. ಪೂಜ್ಯರಾದ ತಾವು ಈ ದಿನ ನಮ್ಮೊಂದಿಗೆ ಊಟ ಮಾಡಬೇಕಾಗಿ ಕೇಳಿಕೊಳ್ಳುತ್ತೇನೆ" ಎಂದು ರಾಮಾನುಜರು ತಿಳಿಸಿದರು.

ದೀಪ್ತಿಮತಿಗೆ ತನ್ನ ಮಗ ಬಾರದೆ ಇರುವುದು ಸ್ವಲ್ಪ ದುಃಖವುಂಟು ಮಾಡಿತು.

ದೀಪ್ತಿಮತಿ ರಾಮಾನಜರನ್ನು ತನ್ನ ಮಗನಿಗಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದಳು. ಆದ ಕಾರಣ ರಾಮಾನುಜರನು ನೋಡಿ ಮನಸ್ಸಿಗೆ ಸಮಾಧಾನ ತಂದುಕೊಂಡಳು.



# 5

# ರಾಜಕುಮಾರಿ

ಮೂರು ತಿಂಗಳ ನಂತರ ಯಾದವ ಪ್ರಕಾಶರು ತಮ್ಮ ಶಿಷ್ಯರೊಡಗೂಡಿ ಕಾಂಚೀಪುರಕ್ಕೆ ಹಿಂದಿರುಗಿದರು. ಗೋವಿಂದ ಮಾತ್ರ ಬಂದಿರಲಿಲ್ಲ.

ಕಾರಣ ಯಾದವ ಪ್ರಕಾಶರು ಶಿಷ್ಯರೊಂದಿಗೆ ವಾರಾಣಸಿ (ಕಾಶಿ) ತಲುಪಿ ಅಲ್ಲಿ ವಿಶ್ವನಾಥನ ದರ್ಶನ ಮಾಡಿ ಪುನೀತರಾದೆವೆಂದು ತಿಳಿದರು. ಅಲ್ಲಿಯೇ ಹದಿನೈದು ದಿನಗಳು ತಂಗಿದರು.

ಒಮ್ಮೆ ಗಂಗೆಯಲ್ಲಿ ಎಲ್ಲರೂ ಸ್ನಾನ ಮಾಡಲು ಹೋದರು. ಸ್ನಾನ ಮಾಡುತ್ತಿದ್ದ ಸಮಯದಲ್ಲಿ ಗೋವಿಂದನಿಗೆ ನೀರಿನಲ್ಲಿ ಒಂದು ಲಿಂಗ (ಬಾಣಲಿಂಗ) ದೊರಕಿತು.

ಆ ಲಿಂಗವನ್ನು ನೋಡಿ ಯಾದವರು ಆತನನ್ನು ಆಶೀರ್ವದಿಸಿದರು. "ಮಗು, ಪಾರ್ವತಿಯ ಪತಿದೇವ ಪರಶಿವನೇ ನಿನ್ನ ಮೇಲೆ ಕೃಪೆತೋರಿ ನಿನ್ನ ಬಳಿ ಬಂದಿದ್ದಾನೆ. ಅವನ ಸೇವೆ ಮಾಡಿ ನೀನು ಮುಕ್ತನಾಗು".

ಇದರಿಂದಾಗಿ ಗೋವಿಂದನಿಗೆ ಮಹದಾನಂದವಾಯಿತು. ನಿತ್ಯವೂ ಅದರ ಸೇವೆಯಲ್ಲಿ ತೊಡಗಿದ್ದನು. ಎಲ್ಲ ಶಿಷ್ಯರೂ ಗುರುಗಳೊಂದಿಗೆ ಕಾಳಹಸ್ತಿಗೆ ಬಂದರು. ಆಗ ಗೋವಿಂದನಿಗೆ ಆ ಸ್ಥಳ ಬಹಳ ಮನೋಹರವಾಗಿ ಕಾಣಿಸಿತು. ತಾನು ಅಲ್ಲಿಯೇ ಉಳಿದುಕೊಳ್ಳುವುದು ಉಚಿತವೆನಿಸಿತು. ಆಗ ಗೋವಿಂದ ತನ್ನ ಸ್ನೇಹಿತರಿಗೆ ತಿಳಿಸಿದನು.

ರಾಗ-ಪೂರ್ವಿಕಲ್ಯಾಣಿ ರೂಪಕ ತಾಳ

ಶಿವನು ದೊರಕಿ । ದನು ನೋಡಿರೊ ।
ಅವನಸೇವೆ । ಮಾಡಿನಿರತ ॥
ಅವನನುಗ್ರಹ । ಪಡೆಮಕರುಣದಿ ।
ಭವಬಂದಂಗಳಿಂ । ದೂರನಾಗುವೆ ॥೧॥

ಗಂಗೆಯಪ್ರೊತ್ತ । ಇಂದುಧರನು
ಚಂದದಿವಿಷ । ವ ಕುಡಿದವನು ॥
ನೊಂದಭಕ್ತರ । ಕರೆಯಕೇಳಿ ।
ಬಂದುರಕ್ಷಿಪ । ಕೈಲಾಸಪತಿಯು ॥೨॥

ಕಾಳಹಸ್ತಿಯು । ಬಳಿಯಲಿರುವ ।
ಒಳ್ಳೆಮಂಗಳ । ಗ್ರಾಮದಲ್ಲಿ ॥
ಬಾಳನೇತ್ರನೀ । ಲಿಂಗವಸ್ಥಾಪಿಸಿ ।
ಬಾಳ ಬೆಳಗಿಪೆ । ಭುವಿಯಜನರ ॥೩॥

ಹೀಗೆ ಶಿವನನ್ನು ಸ್ತುತಿಸಿ, ಈ ವಿಷಯವನ್ನು ತನ್ನ ತಾಯಿ, ದೊಡ್ಡಮ್ಮ ಅವರಿಗೆ ತಿಳಿಸುವಂತೆ ಹೇಳಿ ಅವರನ್ನು ಬೀಳ್ಕೊಟ್ಟನು.

ದ್ಯುತಿಮತಿ ತನ್ನ ಮಗ ಗೋವಿಂದನ ವಿಷಯವನ್ನು ಯಾತ್ರೆ ಮುಗಿಸಿಕೊಂಡು ಬಂದವರಿಂದ ತಿಳಿದು ಸಂತೋಷಪಟ್ಟಳು. ಕೂಡಲೇ ತನ್ನ ಮಗನನ್ನು ನೋಡಲು ಮಂಗಳ ಗ್ರಾಮಕ್ಕೆ ಹೋದಳು. ಅಲ್ಲಿ ತನ್ನ ಮಗನ ಈಶ್ವರನ ಮೇಲಿನ ಭಕ್ತಿಯನ್ನು ನೋಡಿ ಮಹದಾನಂದವಾಯಿತು. ಮಗನನ್ನು ಅಪ್ಪಿಕೊಂಡು ಇಂತಹ ಸುಪುತ್ರನನ್ನು ಪಡೆದ ನಾನೇ ಧನ್ಯಳೆಂದು ತಿಳಿದು, ಆತನನ್ನು ಆಶೀರ್ವದಿಸಿದಳು, ನಂತರ ಅಕ್ಕನ ಮನೆಗೆ ಹಿಂದಿರುಗಿದಳು.

ಯಾದವ ಪ್ರಕಾಶರು ಕಾಂಚೀಪುರಕ್ಕೆ ಬಂದ ಮೇಲೆ ರಾಮಾನುಜರು ಮನೆಗೆ ಬಂದಿರುವ ವಿಷಯ ತಿಳಿದ ಮೇಲೆ, ತಾವೇ ರಾಮಾನುಜರ ಮನೆಗೆ ಹೋಗಿ ರಾಮಾನುಜರನ್ನು ಭೇಟಿ ಮಾಡಿ, ಅವರ ತಾಯಿಯ ಮುಂದೆ ತೋರಿಕೆಯ ಒಂದೆರಡು ಮಾತುಗಳನ್ನಾಡಿದರು "ಮಗು, ವಿಂಧ್ಯಾರಣ್ಯದಲ್ಲಿ ನೀನು ತಪ್ಪಿಸಿಕೊಂಡ ಮೇಲೆ, ಬಹಳ ಶ್ರಮಪಟ್ಟು ನಿನ್ನನ್ನು ಹುಡುಕಿದೆವು".

ರಾಮಾನುಜರು ಯಾದವರ ಪಾದಗಳಿಗೆ ನಮಸ್ಕರಿಸಿ "ಎಲ್ಲವೂ ತಮ್ಮ ಕೃಪೆ" ಎಂದರು.

ಯಾದವ ಪ್ರಕಾಶರು ತಮ್ಮ ಕ್ರೂರಕರ್ಮದ ಅರಿವು ರಾಮಾನುಜರಿಗಿಲ್ಲವೆಂದು ತಿಳಿದಿದ್ದರು. ಯಾದವರು: 'ಎಲೈ ನನ್ನ ಮಗುವೆ, ನೀನು ಪುನಃ ನನ್ನೊಡನೆ ಅಧ್ಯಯನ ಮಾಡಲು ಸೇರಿಕೊ, ದೇವರು ನಿನಗೆ ಒಳ್ಳೆಯದನ್ನು ಮಾಡಲಿ' ಎಂದರು.

ಅಂದಿನಿಂದ ರಾಮಾನುಜರು ಪುನಃ ಯಾದವರಲ್ಲಿಗೆ ಅಧ್ಯಯನಕ್ಕಾಗಿ ಸೇರಿಕೊಂಡರು.

ಕೆಲಕಾಲಾನಂತರ ಆಳವಂದಾರರು ಶ್ರೀವರದರಾಜನ ದರ್ಶನಕ್ಕಾಗಿ ಕಂಚಿಗೆ ಬಂದರು.

ಒಮ್ಮೆ ಅದ್ವೈತಿಗಳಲ್ಲಿ ಸಿಂಹರೆನಿಸಿದ ಯಾದವ ಪ್ರಕಾಶರೊಂದಿಗೆ ರಾಮಾನುಜರನ್ನು ನೋಡಿದರು.

ಅವರ ಅದ್ಭುತ ಸೌಂದರ್ಯ ಹಾಗೂ ಅಧ್ಯಾತ್ಮಿಕ ಕಾಂತಿಯನ್ನು ನೋಡಿ ಯಾಮುನಾಚಾರ್ಯರು ರಾಮಾನುಜರ ಕಡೆ ಕೂಡಲೇ ಆಕರ್ಷಿತರಾದರು. ಅವರಾರೆಂದು ವಿಚಾರಿಸಲಾಗಿ, ಅವರೇ "ಸತ್ಯಂ, ಜ್ಞಾನಂ ಅನಂತಂಬ್ರಹ್ಮ" ಎಂಬ ಮಂತ್ರಕ್ಕೆ ವಿಮರ್ಶಾತ್ಮಕ ವ್ಯಾಖ್ಯಾನ ಬರೆದವರೆಂಬುದು ತಿಳಿಯಿತು.

ಆಗ ಆಳವಂದಾರರಿಗೆ, ರಾಮಾನುಜರು ಒಣವೇದಾಂತಿ ಯಾದವರೊಂದಿಗೆ ಇರುವುದು ಸರಿದೋರಲಿಲ್ಲ, ಅಂದು ಆಳವಂದಾರರು ಶ್ರೀ ವರದರಾಜನ ಬಳಿ ಭಕ್ತಿ ಪೂರ್ವಕವಾಗಿ ಪ್ರಾರ್ಥಿಸಿಕೊಂಡರು –

ಯಸ್ಯ ಪ್ರಸಾದಕಲಯಾಬಧಿರಃ ಶೃಣೋತಿ
ಪಂಗುಃಪ್ರಧಾವತಿಜವೇನ ಚ ವಕ್ತಿಮೂಕಃ ।
ಅಂಧಃ ಪ್ರಪಶ್ಯತಿಸುತಂ ಲಭತೇ ಚ ವಂಧ್ಯಾ
ತಂದೇವಮೇವ ವರದಂ ಶರಣಂಗತೋಽಸ್ಮಿ ॥
ಲಕ್ಷ್ಮೀಶಪುಂಡರೀಕಾಕ್ಷಕೃಪಾಂ ರಾಮಾನುಜೇತವ ।
ನಿಧಾಯ ಸ್ವಮತೇನಾಥಪ್ರವಿಷ್ಟಂಕರ್ತುಮರ್ಹಸಿ ॥

**(ಪ್ರಪನ್ನಾಮೃತ)**

"ಹೇ ಸ್ವಾಮಿಯೇ, ನೀನು ವರದರಾಜ, ನಿನ್ನ ಅಲ್ಪಕರುಣೆಯಿಂದ ಕಿವುಡ ಕೇಳುವಂತಾಗುತ್ತಾನೆ, ಹೆಳವ ವೇಗವಾಗಿ ಓಡಾಡುತ್ತಾನೆ, ಮೂಕನು ಮಾತನಾಡುತ್ತಾನೆ,

ಕುರಡನು ನೋಡುವಂತಾಗುತ್ತಾನೆ, ಬಂಜೆ ಮಗುವಿನ ತಾಯಿಯಾಗುತ್ತಾಳೆ. ಎಲೈ ಲಕ್ಷ್ಮೀಶ, ಪುಂಡರೀಕಾಕ್ಷ, ನಿನ್ನ ಕೃಪೆಯಿಂದ ರಾಮಾನುಜರನ್ನು ನಿನ್ನ ಧರ್ಮಕ್ಕೆ ಸೇರಿಸಿಕೊ ತಂದೆ".

ಹೀಗೆಂದು ಶ್ರೀ ವರದರಾಜನನ್ನು ಪ್ರಾರ್ಥಿಸಿ, ಆಸ್ವಾಮಿಯ ಕೃಪೆ ಇದ್ದರೆ ಒಂದಲ್ಲ ಒಂದು ದಿನ ಅವರಿಗೆ ರಾಮಾನುಜರನ್ನು ನೋಡುವ ಅವಕಾಶ ಸಿಗುವುದೆಂದು ಯೋಚಿಸಿಕೊಂಡು ಆಳವಂದಾರರು ಶ್ರೀರಂಗಕ್ಕೆ ತೆರಳಿದರು.

ಯಾದವ ಪ್ರಕಾಶರು ವೇದಾಂತ ಪಂಡಿತರು ಮಾತ್ರವಲ್ಲದೆ, ಮಂತ್ರವಾದಿಗಳೂ ಸಹ ಆಗಿದ್ದರು. ಇವರು ಭೂತಪ್ರೇತಗಳನ್ನು ಬ್ರಹ್ಮರಾಕ್ಷಸರನ್ನು ಓಡಿಸುವುದರಲ್ಲಿ ಹೆಸರು ಮಾಡಿದ್ದರು.

ಒಮ್ಮೆ ಕಾಂಚೀಪುರದ ರಾಜಕುಮಾರಿಗೆ ಬ್ರಹ್ಮರಾಕ್ಷಸ ಹಿಡಿದಿತ್ತು. ನಾನಾ ಕಡೆಯಿಂದ ಮಂತ್ರವಾದಿಗಳನ್ನು ಕರೆಸಿದರು.-ಪ್ರಯೋಜನವಾಗಲಿಲ್ಲ.

ಆಗ ವೇದಾಂತಾಚಾರ್ಯರಾದ ಯಾದವ ಪ್ರಕಾಶರನ್ನೂ ಸಹ ಕರೆಸಿದರು.

ಯಾದವ ಪ್ರಕಾಶರನ್ನು ನೋಡಿ ಬ್ರಹ್ಮರಾಕ್ಷಸ ಅಟ್ಟಹಾಸದಿಂದ ನಕ್ಕು ಹೇಳಿತು. "ಎಲೆವೋ ಯಾದವ, ನಿನ್ನ ಮಂತ್ರಗಳು ನನ್ನನ್ನು ಏನೂ ಮಾಡಲಾರವು. ಈ ಸ್ಥಳವನ್ನು ಬಿಟ್ಟು ತೊಲಗು".

ರಾಜಕುಮಾರಿಯ ಈ ಮಾತುಗಳನ್ನು ಕೇಳಿಯೂ ಯಾದವರು ಅನೇಕ ಮಂತ್ರಗಳನ್ನು ಉಚ್ಚರಿಸಿದರು. ಪ್ರಯೋಜನವಾಗಲಿಲ್ಲ.

ಮತ್ತೆ ಬ್ರಹ್ಮರಾಕ್ಷಸ ಯಾದವರಿಗೆ ಸೂಚಿಸಿತು. "ಎಲೈ ಯಾದವ, ನಿನ್ನ ಮಂತ್ರಗಳು ನನ್ನನ್ನೇನು ಮಾಡಲಾರವು. ನಾನು ಈ ರಾಜಕುಮಾರಿಯ ದೇಹ-ಗುಡಿಯನ್ನು ಬಿಟ್ಟು ಹೋಗಬೇಕಾದರೆ, ನೀನು ನಿನ್ನ ಕಿರಿಯ ಶಿಷ್ಯರಾದ ದೀರ್ಘಬಾಹುವುಳ್ಳ, ದೈವೀಶಕ್ತಿಯನ್ನು ಪಡೆದಿರುವ ಆ ರಾಮಾನುಜರನ್ನು ಕರೆತಂದರೆ, ಅವರ ಸ್ಪರ್ಶದಿಂದ ನಾನು ರಾಜಕುಮಾರಿಯನ್ನು ಬಿಟ್ಟು ಹೋಗುತ್ತೇನೆ, ಆ ಪುಣ್ಯಾತ್ಮನ ಮುಂದೆ ನಾನು ನಿಲ್ಲಲಾರೆ" ಎಂದು ತಿಳಿಸಿತು.

ಯಾದವರ ಆದೇಶಪಡೆದು ರಾಮಾನುಜರು ಅಲ್ಲಿಗೆ ಧಾವಿಸಿದರು. ಬಂದವರು ಆ ಬ್ರಹ್ಮರಾಕ್ಷಸನಿಗೆ ರಾಜುಕುಮಾರಿಯನ್ನು ಕೂಡಲೇ ಬಿಟ್ಟು ಹೋಗುವಂತೆ ತಿಳಿಸಿದರು.

ಆದರೆ ಬ್ರಹ್ಮರಾಕ್ಷಸ ಹೇಳಿದ – "ತಮ್ಮ ಪವಿತ್ರ ಪಾದಗಳನ್ನು ನನ್ನ ತಲೆಯ ಮೇಲಿಟ್ಟರೆ ನಾನು ಬಿಟ್ಟು ಹೋಗುತ್ತೇನೆ. ತಮ್ಮ ದಾಸನ ಈ ಒಂದು ಬೇಡಿಕೆಯನ್ನು ಈಡೇರಿಸಿ".

ಗುರುಗಳ ಅಣತಿಯಂತೆ ರಾಮಾನುಜರು ತಮ್ಮ ಪಾದಗಳನ್ನು ರಾಜಕುಮಾರಿಯ ಮೇಲಿರಿಸಿದರು. "ಈಗ ಬಿಟ್ಟು ಹೋಗು. ಆದರೆ ಬಿಟ್ಟು ಹೋಗುವಾಗ ನಮಗೆ ಯಾವುದಾದರೂ ಕುರುಹನ್ನು ತೋರಿಸು" ಎಂದರು. ಬ್ರಹ್ಮರಾಕ್ಷಸ: ಇದೋ ನೋಡಿ, ನಾನು ಬಿಟ್ಟು ಹೋಗುತ್ತೇನೆ, ಕುರುಹಾಗಿ ಪಕ್ಕದ ಆಲದಮರದ ಕೊಂಬೆಯನ್ನು ಮುರಿದು ಹೋಗುತ್ತೇನೆ.

ಅದೇ ರೀತಿ ಮರದ ಕೊಂಬೆ ನೆಲಕ್ಕೆ ಕಟಕಟ ಶಬ್ದಮಾಡುತ್ತಾ ಮುರಿದುಬಿತ್ತು. ರಾಜಕುಮಾರಿ ನಿದ್ರೆಯಿಂದ ಎಚ್ಚತ್ತಂತೆ ಎದ್ದು ಕೂತಳು. ನಾಚಿಕೆಯಿಂದ ತನ್ನ ದಾಸಿಯರಿದ್ದ ಕೊಠಡಿಗೆ ಓಡಿ ಹೋದಳು.

ಕಂಚಿಯ ರಾಜನು ತನ್ನ ಮಗಳನ್ನು ರಾಮಾನುಜರು ಬ್ರಹ್ಮಾರಾಕ್ಷಸನ ಹಿಡಿತದಿಂದ ಮುಕ್ತಳನ್ನಾಗಿ ಮಾಡಿದರೆಂಬ ವಿಷಯ ತಿಳಿದು, ಕೂಡಲೇ ಅವರಲ್ಲಿಗೆ ಓಡಿ ಬಂದನು. ಅವರ ಪಾದಾರ್ಚನೆ ಮಾಡಿ ಗೌರವ ಸಲ್ಲಿಸಿದನು.

ಈಗಿನ ಪಾಶ್ಚಾತ್ಯ ವೈದ್ಯರು ಇದನ್ನು ಅಂಧ ವಿಶ್ವಾಸ, ಅದು ಕೇವಲ ನರಗಳ ದೌರ್ಬಲ್ಯದಿಂದ ಬರುವ ಖಾಯಿಲೆ ಎನ್ನುತ್ತಾರೆ. ಅದು ಹಿಸ್ಟೀರಿಯಾ ಎನ್ನುತ್ತಾರೆ. ಹಿಂದೆ ನಮ್ಮ ದೇಶದಲ್ಲಿಯೇ ಇದ್ದ ಚಾರ್ವಾಕನ ಅನುಯಾಯಿಗಳೂ ಸಹ ಇದೇ ಅಭಿಪ್ರಾಯವನ್ನು ಒಪ್ಪುತ್ತಾರೆ. ಆದರೆ ಇದು ಸತ್ಯವಲ್ಲ, ತಪ್ಪುಕಲ್ಪನೆ.

ಆತ್ಮವು ಶರೀರವನ್ನು ರಕ್ಷಿಸುವುದೇ ಹೊರತು ದೇಹ ಆತ್ಮವನ್ನು ರಕ್ಷಿಸಲಾರದು. ಆತ್ಮವು ಶರೀರದಲ್ಲಿರುವನಕ, ಈ ಜಡದೇಹವು ಚೈತನ್ಯವನ್ನು ಪಡೆದಿರುತ್ತೆ, ಪವಿತ್ರವೂ ಸಹ ಆಗಿರುತ್ತದೆ. ಈ ಶರೀರದಿಂದಾಗಿ ಮನುಷ್ಯ ಈ ಪ್ರಪಂಚದಲ್ಲಿ ಸುಖದುಃಖಗಳನ್ನು ಅನುಭವಿಸುತ್ತಾನೆ. ಜೀವಾತ್ಮನು ದೇಹದ ನೆರವಿನಿಂದ ಯಾವಾಗಲೂ ಸುಖವನ್ನನು ಭವಿಸಲು ಬಯಸುತ್ತಾನೆ.

ಅಂದ ಮೇಲೆ ಈ ಆತ್ಮ ಸ್ಥೂಲ ದೇಹವನ್ನು ಪಡೆದು ಮನುಷ್ಯನಾಗಬಹುದು, ಪಶು–ಪಕ್ಷಿ, ಕ್ರಿಮಿ–ಕೀಟ ಮೊದಲಾದ ರೂಪವನ್ನು ತಾಳಬಹುದು.

ಈ ದೇಹವಿಯೋಗವಾದ ಮೇಲೆ ಅದೇ ಆತ್ಮ ದೇವತೆ, ಯಕ್ಷ ಗಂಧರ್ವ, ಭೂತಪ್ರೇತ, ಪಿಶಾಚಿ, ಬ್ರಹ್ಮರಾಕ್ಷಸನ ರೂಪ ಪಡೆಯಬಹುದು. ಇದು ಸೂಕ್ಷ್ಮರೂಪಿಯಾದ ಕಾರಣ ಇಂದ್ರಿಯ ಗೋಚರವಾಗುವುದಿಲ್ಲ.

ಈ ಸೂಕ್ಷ್ಮ ಶರೀರ ಸತ್ವಗುಣ ಪ್ರಧಾನವಾದರೆ ದೇವನಾಗಿ, ರಜೋಗುಣ ಪ್ರಧಾನವಾದರೆ ಯಕ್ಷ ಗಂಧರ್ವನಾಗಿ, ತಮೋಗುಣ ಪ್ರಧಾನವಾದರೆ, ಬ್ರಹ್ಮರಾಕ್ಷಸ, ಭೂತಪ್ರೇತವಾಗಿ ರೂಪತಳೆಯಬಹುದು.

ಇದರಿಂದಾಗಿ ಸಾತ್ವಿಕ ಗುಣವುಳ್ಳವನು ದೇವನ ಅಧೀನನಾಗುತ್ತಾನೆ, ರಜೋಗುಣದವನು ಯಕ್ಷ ಗಂಧರ್ವರ ವಶವಾಗುತ್ತಾನೆ, ತಮೋಗುಣದವನು ಭೂತ ಪ್ರೇತಗಳ ಹಿಡತಕ್ಕೆ ಸಿಕ್ಕಿ ನರಳುತ್ತಾನೆ. ಈ ರೀತಿ ಈಶ್ವರ ಕೃಷ್ಣರೆಂಬ ಗ್ರಂಥಕರ್ತರು ತಮ್ಮ ಗ್ರಂಥ 'ಸಾಂಖ್ಯಕಾರಿಕಾ'ದಲ್ಲಿ ಪ್ರತಿಪಾದಿಸಿದ್ದಾರೆ.

ಈ ಘಟನೆಯ ನಂತರ ರಾಮಾನುಜರ ದಿವ್ಯಶಕ್ತಿಯ ಪ್ರಭಾವ ಚೋಳ ರಾಜ್ಯದಲ್ಲೆಲ್ಲಾ ಹಬ್ಬಿತು.

ಎಂದಿನಂತೆ ಯಾದವ ಪ್ರಕಾಶರು ತಮ್ಮ ತತ್ವಬೋಧೆಯನ್ನು ಮುಂದುವರಿಸಿದರು. ನಿತ್ಯವೂ ರಾಮಾನುಜರು ಹಾಗೂ ಇತರೆ ಶಿಷ್ಯರು ಪವಿತ್ರ ಗ್ರಂಥಗಳ ಬಗ್ಗೆ ಯಾದವರು ಹೇಳುತ್ತಿದ್ದ ಸೂಕ್ಷ್ಮಾತಿ ಸೂಕ್ಷ್ಮ ವಿಷಯಗಳನ್ನು ಗಮನವಿಟ್ಟು ಕೇಳುತ್ತಿದ್ದರು.

ಒಂದು ದಿನ ಉಪನಿಷತ್ತಿನ ಎರಡು ಮಹಾ ಸೂಕ್ತಗಳಾದ 'ಸರ್ವಂ ಖಲ್ವಿದಂ ಬ್ರಹ್ಮ' ಇದೆಲ್ಲವೂ ಬ್ರಹ್ಮನೇ, 'ನೇಹನಾನಾಸ್ತಿಕಿಂಚನ' ಇಲ್ಲಿ ಯಾವುದೇ ರೀತಿಯ ಭಿನ್ನತೆಯಿಲ್ಲ. ಈ ರೀತಿ ಹೇಳಿ ಯಾದವರು ತಮ್ಮ ವಾಕ್ಚಟುತ್ವದಿಂದ ಸಮರ್ಥಿಸುತ್ತಾ ಆತ್ಮ ಮತ್ತು ಬ್ರಹ್ಮಗಳ ಏಕ ರೂಪತೆಯನ್ನು ಎತ್ತಿಹಿಡಿದರು.

ರಾಮಾನುಜರನ್ನು ಬಿಟ್ಟು ಉಳಿದೆಲ್ಲ ಶಿಷ್ಯರು ಗುರುಗಳ ಸಮರ್ಥನೆಯನ್ನು ಮೆಚ್ಚಿದರು. ಈ ವಾರ್ತಾಲಾಪ ಮುಗಿದನಂತರ ರಾಮಾನುಜರು ಮಂತ್ರಗಳ ಈ ಭಾಗಗಳಿಗೆ ತಮ್ಮದೇ ಆದಂತಹ ಅಭಿಪ್ರಾಯಗಳನ್ನು ಕೊಟ್ಟರು.

ಈ ವ್ಯಾಖ್ಯಾನದಲ್ಲಿ 'ಸರ್ವಂಖಲ್ವಿದಂಬ್ರಹ್ಮ' ಎಂಬುದಕ್ಕೆ ಇಡೀ ಜಗತ್ತೇ ಬ್ರಹ್ಮ ಎಂಬುದನ್ನು **'ತಜ್ಜಲಂ'** ಎಂಬ ಶಬ್ದದಿಂದ ಪ್ರತಿಪಾದಿಸಬಹುದು ಎಂದು ರಾಮಾನುಜರು ತಿಳಿಸಿದರು.

ಅವರ ವ್ಯಾಖ್ಯಾನದ ಪ್ರಕಾರ - 'ಸರ್ವಂ ಖಲ್ವಿದಂ ಬ್ರಹ್ಮ' ಎಂದರೆ 'ತಜ್ಜಲಂ' ಎಂಬಂತೆ ಈ ಇಡೀ ಜಗತ್ತು ಬ್ರಹ್ಮ ಈ ಜಗತ್ತು ಬ್ರಹ್ಮದಿಂದ ಸೃಷ್ಟಿಯಾಗಿದೆ, ಬ್ರಹ್ಮದಿಂದ ರಕ್ಷಿತವಾಗಿದೆ, ಮತ್ತೆ ಬ್ರಹ್ಮದಲ್ಲೇ ಲೀನವಾಗುತ್ತೆ. ಅಂದಮೇಲೆ ಈ ಜಗತ್ತು ಬ್ರಹ್ಮದೊಂದಿಗೆ ವ್ಯಾಪ್ತವಾಗಿದೆ.

ಮೀನು ನೀರಿನಲ್ಲೇ ಹುಟ್ಟಿದೆ. ನೀರಿನಲ್ಲೇ ಜೀವಿಸುತ್ತದೆ, ನೀರಿನಲ್ಲೇ ಲೀನವಾಗುತ್ತದೆ. ಅಂದ ಮೇಲೆ ಅದು ನೀರಿನಲ್ಲೇ ವ್ಯಾಪ್ತವಾಗಿದೆ. ಆದರೆ ಮೀನು ನೀರಲ್ಲ. ಅಂತೆಯೇ ಜಗತ್ತು ಎಂದಿಗೂ ಬ್ರಹ್ಮವಾಗಲಾರದು.

ಮತ್ತೆ 'ನೇಹ ನಾನಾಸ್ತಿ ಕಿಂಚನ' ಇಲ್ಲಿ ಯಾವುದೇ ವಿಧವಾದ ಭಿನ್ನತೆ ಇಲ್ಲ ಎಂಬುದು ಸಹ ಅದರ ಸರಿಯಾದ ಅರ್ಥವಲ್ಲ.

ಈ ಸಂಸಾರದ ಎಲ್ಲಾ ವಸ್ತುಗಳು ಬೇರೆ ಬೇರೆಯಾಗಿ ಅಸ್ತಿತ್ವದಲ್ಲಿಲ್ಲ, ಮುತ್ತುಗಳನ್ನು ಒಂದೇ ದಾರದಲ್ಲಿ ಪೋಣಿಸಿ ಹಾರವನ್ನಾಗಿಸುವಂತೆ, ಬೇರೆ ಬೇರೆ ವಸ್ತುಗಳು ಬ್ರಹ್ಮ ಸೂತ್ರದಲ್ಲಿ ಸೇರಿ ಈ ಪ್ರಪಂಚವನ್ನಾಗಿಸಿವೆ.

ಅನೇಕ ವಸ್ತುಗಳು ಒಂದುಗೂಡಿ ಏಕತ್ವಭಾವವನ್ನು ತೋರುತ್ತವೆ. ಆದರೆ ಸ್ವಭಾವತಃ ಅವುಗಳ ಭಿನ್ನತೆ ನಷ್ಟವಾಗಿಲ್ಲ ಎಂದು ರಾಮಾನುಜರು ತಮ್ಮ ಸ್ಪಷ್ಟೀಕರಣಕೊಟ್ಟರು.

**ಯಾದವರು:** (ಇದನ್ನು ಕೇಳಿಕೊಪಗೊಂಡು) "ನೀನು ನನ್ನ ಅಭಿಪ್ರಾಯವನ್ನು ಒಪ್ಪದ ಮೇಲೆ ಇನ್ನು ಮುಂದೆ ನನ್ನಲ್ಲಿಗೆ ಬರಬೇಡ".

**ರಾಮಾನುಜರು:** "ತಮ್ಮ ಇಷ್ಟದಂತೆಯೇ ಆಗಲಿ" ಎಂದು ಹೇಳಿ ಅವರ ಪಾದಗಳಿಗೆ ನಮಸ್ಕರಿಸಿ ಮನೆಗೆ ಬಂದು ಬಿಟ್ಟರು. ಪುನಃ ಯಾದವರ ಬಳಿ ಹೋಗಲಿಲ್ಲ.

— ❋ —

# 6

# ಶ್ರೀ ಕಾಂಚೀಪೂರ್ಣರು

ಯಾದವ ಪ್ರಕಾಶರ ಆಶ್ರಯವನ್ನು ತ್ಯಜಿಸಿಬಂದ ರಾಮಾನುಜರು ಒಂದು ದಿನ ಬೆಳಗ್ಗೆ ಶಾಸ್ತ್ರಾರ್ಥಗಳನ್ನು ಚರ್ಚಿಸುತ್ತಿದ್ದರು. ಅದೇ ಸಮಯಕ್ಕೇ ಶ್ರೀ ಕಾಂಚೀಪೂರ್ಣರು ಅಲ್ಲಿಗೆ ಬಂದರು. ಕಾಂಚೀಪೂರ್ಣರು ದಾಸತ್ವವೇ ದೇಹ ಧರಿಸಿ ಬಂದಂತಿದ್ದರು. ಅವರನ್ನು ನೋಡುತ್ತಲೇ ರಾಮಾನುಜರಿಗೆ ಮಹದಾನಂದವಾಯಿತು.

"ಶ್ರೀ ವರದರಾಜನು ಕರುಣೆಯಿಂದ ಸಂಸಾರವೆಂಬ ಅರಣ್ಯದಲ್ಲಿ ದಿಕ್ಕು ಕಾಣದೆ ಅಲೆಯುತ್ತಿರುವ ನನ್ನನ್ನು ಉದ್ಧರಿಸಲೆಂದು ತಮ್ಮನ್ನು ನನ್ನಲ್ಲಿಗೆ ಕಳುಹಿಸಿರುವನೆಂದು ಭಾವಿಸುತ್ತೇನೆ, ನನ್ನನ್ನೂ ಯಾದವ ಪ್ರಕಾಶರು ದೂರೀಕರಿಸಿದರು. ಅವರು ಹಾಗೆ ನನ್ನನ್ನು ದೂರಮಾಡಿದ್ದು ಒಳ್ಳೆಯದೇ ಆಯಿತು. ತಮ್ಮ ಆಶ್ರಯ ದೊರಕುವಂತಾಯಿತು. ತಾವು ನನಗೆ ಗುರುವಾಗಿ ನನ್ನನ್ನು ತಮ್ಮ ಶಿಷ್ಯನನ್ನಾಗಿ ಅನುಗ್ರಹಿಸಿ", ಎಂದು ರಾಮಾನುಜರು ಕಾಂಚೀಪೂರ್ಣರನ್ನು ಪ್ರಾರ್ಥಿಸಿಕೊಂಡರು.

**ಕಾಂಚೀಪೂರ್ಣರು:** "ನಾನು ಶೂದ್ರ. ಶಾಸ್ತ್ರಗಳನ್ನರಿಯದ ಅಜ್ಞಾನಿ. ನೀವು ಬ್ರಾಹ್ಮಣರು, ದಿವ್ಯಜ್ಞಾನಿ. ನಾನು ಕೇವಲ ಶ್ರೀ ವರದರಾಜಸ್ವಾಮಿಯ ಸೇವೆ ಮಾಡಿ ಕೊಂಡಿರುವ ಅವನ ದಾಸ. ನಾನು ನಿಮ್ಮ ಸೇವಕ, ನೀವು ನನ್ನ ಗುರು".

**ರಾಮಾನುಜರು:** ತಾವು ಶಾಸ್ತ್ರಗಳಲ್ಲಿ ಅಜ್ಞಾನಿಗಳಾದಾಗ್ಯೂ, ದೊಡ್ಡ ಭಗವದ್ಭಕ್ತರು. ಶಾಸ್ತ್ರಗಳು ಒಬ್ಬನನ್ನು ಕೇವಲ ಪಂಡಿತನನ್ನಾಗಿ ಮಾಡಿ ಅವನ ದರ್ಪವನ್ನು ಹೆಚ್ಚಿಸುತ್ತವೆಯೇ ಹೊರತು, ಇಂತಹ ಜ್ಞಾನಕ್ಕಿಂತ ಅಜ್ಞಾನಿಯಾಗಿರುವುದೇ ಲೇಸು. ನನ್ನನ್ನು ದಯವಿಟ್ಟು

ಕೈಬಿಡಬೇಡಿ. ನನಗೆ ತಮ್ಮ ಚರಣಗಳಲ್ಲಿ ಆಶ್ರಯ ಕೊಡಿ". ಈ ರೀತಿ ಹೇಳುತ್ತಾ ರಾಮಾನುಜರು ಶ್ರೀ ಕಾಂಚೀಪೂರ್ಣರ ಪಾದಗಳಿಗೆ ಎರಗಿ ಅಳ ತೊಡಗಿದರು.

**ಕಾಂಚೀಪೂರ್ಣರು:** (ರಾಮಾನುಜರನ್ನು ಮೇಲೆತ್ತಿ ತಬ್ಬಿಕೊಂಡರು. ಅಪಾರ ಪ್ರೀತಿ ತೋರಿಸುತ್ತಾ), "ಮಗುವೆ, ನಾನು ನಿನ್ನ ಅಪಾರ ದೈವಭಕ್ತಿಯನ್ನು ನೋಡಿ ಧನ್ಯನಾದೆನು. ಇಂದಿನಿಂದ ನೀನು ನಿತ್ಯವೂ ಶ್ರೀ ವರದರಾಜನ ಪೂಜೆಗೆ ಸಾಲಬಾವಿಯಿಂದ ಒಂದು ಕೊಡ ಪವಿತ್ರ ನೀರನ್ನು ತೆಗೆದುಕೊಂಡು ಹೋಗಿ ಕೊಡು. ಬಹಳ ಬೇಗ ಶ್ರೀ ವರದರಾಜನು ನಿನ್ನ ಇಷ್ಟಾರ್ಥವನ್ನು ಪೂರ್ಣಗೊಳಿಸುವನು".

ಕಾಂಚೀಪೂರ್ಣರು ಶ್ರೀ ವರದರಾಜನ ಅನನ್ಯ ಭಕ್ತರು. ಅವರ ಸ್ಥಳ ಪೂನಮಲ್ಲೀ. ಬಾಲ್ಯದಿಂದಲೇ ಸ್ವಾಮಿಯ ಸೇವೆಯಲ್ಲಿ ತೊಡಗಿದ ಮಹಾಭಕ್ತರು. ಜನರು ಅವರ ಪರಮಭಕ್ತಿಯನ್ನು ನೋಡಿ, ಅವರು ವೈಕುಂಠದ ಶ್ರೀ ವರದರಾಜನ ಅಮರ ದಾಸನೆಂದೇ ತಿಳಿದಿದ್ದರು.

ಅವರ ದರ್ಶನ ಮಾತ್ರದಿಂದ ಜನರ ಭ್ರಮೆ, ಮಾನಸಿಕ ದುಃಖ ಎಲ್ಲವೂ ದೂರವಾಗುತ್ತಿದ್ದವು. ಆನಂದ ಭರಿತರಾಗುತ್ತಿದ್ದರು.

ಶ್ರೀ ವರದರಾಜನು ಅಗೋಚರವಾಗಿ ಸದಾ ಅವರೊಂದಿಗೆ ಇರುತ್ತಿದ್ದನು. ಅವರೊಂದಿಗೆ ಮಾತನಾಡುತ್ತಿದ್ದನು.

ಕೇವಲ ಯಾದವ ಪ್ರಕಾಶರಂತಹ ವಿದ್ವಾಂಸರು ಎಲ್ಲಾ ಶಾಸ್ತ್ರಗಳ ಸೃಷ್ಟಿಕರ್ತರೆಂದು ಹೆಮ್ಮೆ ಪಡುತ್ತಿದ್ದವರು ಮಾತ್ರ ಇವರನ್ನು ಹುಚ್ಚನೆಂತಲೂ, ಕಪಟಿಯೆಂತಲೂ ಭಾವಿಸುತ್ತಿದ್ದರು.



# 7

# ಸ್ತೋತ್ರರತ್ನ

ಯಾಮುನಾಚಾರ್ಯರು ಆಗಲೇ ವಯೋವೃದ್ಧರಾಗಿದ್ದರು. ಅವರು ರಾಮಾನುಜರನ್ನು ನೋಡಿದಂದಿನಿಂದ ಅವರ ಯೋಗಕ್ಷೇಮದ ಚಿಂತನೆಯಲ್ಲೇ ತೊಡಗಿದ್ದರು. ಅವರು ರಾಮಾನುಜರನ್ನು ತಮ್ಮ ಮಗನೆಂದೇ ಭಾವಿಸಿದ್ದರು. ಆಳವಂದಾರರಿಗೆ ಕನಸು ಮನಸಿನಲ್ಲಿಯೂ, ಸದಾ ರಾಮಾನುಜರ ಚಿಂತೆಯೇ ಕೊರೆಯುತ್ತಿತ್ತು.

ನಿತ್ಯವೂ ಶ್ರೀ ರಂಗನಾಥನನ್ನು ಅನನ್ಯ ಭಕ್ತಿಯಿಂದ ಕೇಳಿಕೊಳ್ಳುತ್ತಿದ್ದರು.

**ರಾಗ-ತೋಡಿ** **ಝಂಪೆ ತಾಳ**

ಕರುಣಬಾರದೆ ರಂಗ । ಕರುಣಬಾರದೆ ನಿನಗೆ ।
ನಿರತ ನಿನ್ನಧ್ಯಾನಮಾಳ್ಪ । ಈ ದಾಸನ ಮೇಲೆ ॥ಪ॥
ಕರುಣೆ ತೋರಿ ನಿನ್ನನುಜ । ರಾಮಾನುಜನನ್ನು ।
ಸೆರೆಬಿಡಿಸಿ ಯಾದವನ । ಕರೆಸು ನಿನ್ನಯ್ಯ ಸೇವೆಗೆ ॥೧॥

ಅವನಕಾಣ್ಬ ಆಸೆಯೆನ್ನ । ಹೃದಯದಲಿ ನೆಲೆಸಿಹುದು ।
ಭವಬಂಧಗಳ ಕಳೆವ । ವೈಷ್ಣವದೀಕ್ಷೆಯನ್ನಿತ್ತು ॥
ಅವನನು ಶ್ರೀ ವೈಷ್ಣವ । ಆಚಾರ್ಯನನು ಮಾಳ್ಪ ।
ಜವದಿವಿನ್ನಭೀಷ್ಟವ । ಪೂರ್ಣಗೊಳಿಸೊ ಎಲೆ ಪ್ರಭುವೆ ॥೨॥

ಯಾಮುನಾಚಾರ್ಯರು ಈ ರೀತಿ ತನ್ನ ಪ್ರಭು ಶ್ರೀ ರಂಗನಾಥ ಸ್ವಾಮಿಯನ್ನು ರಾಮಾನುಜರನ್ನು ಬೇಗ ತನ್ನ ಸನ್ನಿಧಿಗೆ ಬರಮಾಡಿಕೊಳ್ಳುವಂತೆ ಹೃತ್ಪೂರ್ವಕವಾಗಿ ಪ್ರಾರ್ಥಿಸಿದರು.

ಆಳವಂದಾರರು ತಮ್ಮ ಗುರುಗಳಾದ ನಾಥಮುನಿಗಳನ್ನು ಹಾಗೂ ತನ್ನ ಸ್ವಾಮಿಯಾದ ವಿಷ್ಣುವನ್ನು ನಾನಾ ರೀತಿಯಲ್ಲಿ, ತುಂಬು ಹೃದಯದಿಂದ ಪ್ರಾರ್ಥಿಸಿದ್ದಾರೆ. ಅವರು ರಚಿಸಿರುವ 65 ಸ್ತೋತ್ರಗಳು ಹೃದಯಂಗಮವಾಗಿವೆ. ಈಗಲೂ ಸಹ"**ಸ್ತೋತ್ರರತ್ನ**"ವೆಂದು ಪ್ರಸಿದ್ಧವಾಗಿದೆ.

ಈ ಸಂದರ್ಭದಲ್ಲಿ ಅವುಗಳಲ್ಲಿ ಒಂದೆರಡನ್ನು ಉದಾಹರಿಸಬಹುದು.

1. ನಮೋಽಚಿಂತ್ಯಾದ್ಭುತಾಕ್ಲಿಷ್ಟಜ್ಞಾನ ವೈರಾಗ್ಯರಾಶಯೇ ।
   ನಾಥಾಯ ಮುನಯೇಽಗಾಧಭಗವದ್ಭಕ್ತಿ ಸಿಂಧವೇ ॥

ನನ್ನ ಪರಮ ಗುರುಗಳಾದ, ಧ್ಯಾನತತ್ಪರರಾದ ನಾಥಮುನಿಗಳಿಗೆ ನಮಿಸುತ್ತೇನೆ. ಅವರು ಅಗಾಧ ಭಗವದ್ಭಕ್ತಿ ಪ್ರೇಮಗಳ ಸಾಗರ, ಅವರು ಚಿಂತಿಸಲಾಗದ, ಅದ್ಭುತವಾದ ದೋಷರಹಿತವಾದ ಜ್ಞಾನ ವೈರಾಗ್ಯಗಳ ಮಹಾರಾಶಿ.

2. ತಸ್ಮೈನಮೋ ಮಧು ಜಿದಂಘ್ರಿ ಸರೋಜತತ್ವ
   ಜ್ಞಾನಾನುರಾಗ ಮಹಿಮಾತಿಶಯಾಂತ ಸೀಮ್ನೇ ।
   ನಾಥಾಯಾ ನಾಥಮುನಯೇಽತ್ರ ಪರತ್ರಚಾಪಿ
   ನಿತ್ಯಂ ಯದೀಯ ಚರಣೌಶರಣಂ ಮದೀಯಂ ॥

ಆ ನನ್ನ ಪರಮ ಗುರುಗಳಿಗೆ ನಮಿಸುತ್ತೇನೆ. ಶ್ರೀಮದ್ ವಿಷ್ಣುವಿನ ಕಮಲಾಂಘ್ರಿಗಳಲ್ಲಿ ಅರ್ಪಿಸುವ ಪ್ರೇಮ, ತತ್ವಜ್ಞಾನದ ಶ್ರೇಷ್ಠ ಮಹಿಮೆ – ಇವುಗಳ ಪ್ರತೀಕರಾದ ನಾಥಮುನಿಗಳ ಚರಣಂಗಳು ನನಗೆ ಇಹದಲ್ಲೂ ಪರದಲ್ಲೂ ಆಶ್ರಯ ಕೊಡಲಿ.

— ❋ —

# 8

# ಆಳವಂದಾರ್

ಆಳವಂದಾರರು ಕೆಲವು ದಿನಗಳು ಕಳೆದ ನಂತರ ಖಾಯಿಲೆ ಬಿದ್ದು ಹಾಸಿಗೆ ಹಿಡಿದರು. ರಾತ್ರಿ ಹಗಲೆನ್ನದೆ ಸದಾ ಪರಮಾತ್ಮನ ಧ್ಯಾನ-ಭಕ್ತಿಯ ಮಹಿಮೆಯ ಗಾನವನ್ನೇ ಮಾಡುತ್ತಿದ್ದರು.

ಪದೇ ಪದೇ ತನ್ನ ಶಿಷ್ಯರನ್ನು ಕುರಿತು ಹೇಳುತ್ತಿದ್ದರು. "ಹೂವಿನ ಸಾರ ಜೇನು, ಹಸುವಿನ ಸತ್ವ ತುಪ್ಪ ಅಂತೆಯೇ ಮೂರು ಲೋಕಗಳ ಸತ್ವ ನಾರಾಯಣ. ಅವನ ಶರಣು ಹೋದವನು ಮಾನವ ಜೀವನದ ಮುಖ್ಯ ನಾಲ್ಕು ಧ್ಯೇಯಗಳನ್ನೂ ಪಡೆಯುತ್ತಾನೆ. ಅಂದರೆ ಧರ್ಮ, ಸಂಪತ್ತು, ಭೋಗ ಮತ್ತು ಅಂತಿಮ ಮುಕ್ತಿ.

ಅದೇ ಸಮಯದಲ್ಲಿ ತಮ್ಮ ವೈಯಕ್ತಿಕ ಸಂದೇಹಗಳನ್ನು ಪರಿಹರಿಸಿಕೊಳ್ಳಲು ಮಹಾ ಪೂರ್ಣರು, ತಿರುಕ್ಕೋಟಿಯೂರ್‌ಪೂರ್ಣರು, ಮೊದಲಾದ ಆಳವಂದಾರರ ಶಿಷ್ಯರು ಬಯಸಿದರು.

ಆಳವಂದಾರರ ಸಮವಯಸ್ಕರಾದ ತಿರುವರಂಗ ಪೆರುಮಾಳರೈಯರನ್ನು ತಮ್ಮ ಪರವಾಗಿ ಗುರುಗಳನ್ನು ಪ್ರಶ್ನಿಸಲು ಕೇಳಿಕೊಂಡರು.

**ತಿರುವರಂಗರು:** ಪೂಜ್ಯರೇ, ಶ್ರೀಮನ್ನಾರಾಯಣನು ವಾಙ್ಮನೋತೀತನು, ಅವನನ್ನು ಸೇವಿಸುವುದು ಹೇಗೆ?

**ಯಾಮುನಮುನಿ:** ಸ್ವಾಮಿಯ ಭಕ್ತರನ್ನು ಸೇವಿಸಿದರೆ ಭಗವಂತನನ್ನು ಸೇವಿಸಿದಂತಾಗುತ್ತದೆ. ಭಗವದ್ಭಕ್ತನಿಗೆ ಯಾವ ಕುಲಗೋತ್ರಗಳೂ ಇಲ್ಲ. ಭಕ್ತನೇ ದೇವರ ಕಾಣುವ ರೂಪ.

ಜಾತಿಯಲ್ಲಿ ಶೂದ್ರರಾದರೂ ತಿರುಪ್ಪಾಣ್ ಆಳ್ವಾರರ ಪ್ರತಿಮೆಯನ್ನು ಪೂಜಿಸಿದರೆ ನಾರಾಯಣನನ್ನು ಪೂಜಿಸಿದಂತಾಗುತ್ತದೆ. ತಿರುಪ್ಪಾಣ್ ಆಳ್ವಾರರು ಯಾವಾಗಲೂ ಜೀವನ ಪರ್ಯಂತ ಏಕಾಗ್ರತೆಯಿಂದ ಶ್ರೀ ರಂಗನಾಥನನ್ನು ಆರಾಧಿಸಿದರು. ಅಂತೆಯೇ ಕಾಂಚೀಪೂರ್ಣರು ಶ್ರೀ ವರದರಾಜನಿಗೆ ಅಮೂಲ್ಯ ಸೇವೆ ಸಲ್ಲಿಸಿದರು. ಅವರನ್ನು ನೀನು ಅನುಸರಿಸುವುದಾದರೆ ಪರಮಾನಂದವು ಲಭಿಸುತ್ತದೆ.

**ಮಹಾಜನೋ ಯೇನಗತಃ ಸಪಂಥಾಃ ।**

ಮಹಾಪುರುಷರು ತುಳಿಯುವ ಮಾರ್ಗವೇ ಸರಿಯಾದ ಮಾರ್ಗ.

ಆಳವಂದಾರರು ಪುನಃ ತಿರುವರಂಗರ ಕಡೆ ತಿರುಗಿ ಹೀಗೆ ಹೇಳಿದರು.

**ಆಳವಂದಾರ್:** ಶ್ರೀ ರಂಗನಾಥನ ಪರಮಭಕ್ತ ತಿರುಪ್ಪಾಣ್ ಆಳ್ವಾರರೇ ನನ್ನ ಶರಣ್ಯರು. ಅವರೇ ನನ್ನ ಜೀವನ ಸಾಗರದ ಕರ್ಣಧಾರರು.

ಗುರುಗಳ ಈ ಮಾತುಗಳನ್ನು ಕೇಳಿ ನೊಂದು ಕೇಳಿದರು.

**ತಿರುವರಂಗರು:** ಪೂಜ್ಯರೇ, ತಾವು ತಮ್ಮ ಶರೀರವನ್ನು ತ್ಯಜಿಸಲು ನಿರ್ಧರಿಸಿರುವಿರಾ?

**ಯಾಮುನರು:** ಪರಮಾತ್ಮನಿಚ್ಛೆಯಿದ್ದಂತಾಗುತ್ತೆ. ನೀನು ಚಿಂತಿಸಬೇಡ, 'ನಾನು' ಎಂಬ ಅಹಂಕಾರವನ್ನು ಸ್ವಾಮಿಯ ಪಾದಗಳಿಗರ್ಪಿಸಿದರೆ, ಎಲ್ಲಾ ದುಃಖಗಳಿಂದ ದೂರನಾಗುವೆ. ಅಹಂಕಾರವೇ ಎಲ್ಲ ದುಃಖಗಳಿಗೂ ಮೂಲ. ಅಹಂನಿಂದ ದೂರವಾದರೆ ಮಾತ್ರ ಶಾಶ್ವತ ಸುಖ ದೊರಕುವುದು. ಆಗ ಅತನು ಹುಟ್ಟು ಸಾವುಗಳಿಂದ ದೂರನಾಗುತ್ತಾನೆ. ಸದಾ ನಾರಾಯಣನ ದಾಸನ ದಾಸನಾಗಿರುತ್ತಾನೆ.

ಆಳವಂದಾರರು ದೇಹತ್ಯಾಗ ಮಾಡುತ್ತಲೇ ಮಹಾಪೂರ್ಣರು ಮತ್ತು ತಿರುಕ್ಕೋಟಿಯಾರ್ ಪೂರ್ಣರು ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ನಿರ್ಧರಿಸಿದರು. ಮತ್ತೊಬ್ಬ ಶಿಷ್ಯ – "ತಮ್ಮ ನಿರ್ಗಮನದ ನಂತರ ನಾವು ಯಾರ ಶರಣು ಹೋಗಬೇಕು?"

**ಯಾಮುನರು:** ಶ್ರೀ ರಂಗನಾಥ ಇದ್ದಾನೆ. ಮಕ್ಕಳೇ, ನೀವು ಯಾರೂ ಚಿಂತಿಸ ಬೇಕಾಗಿಲ್ಲ. ಇಲ್ಲಿಯವರೆವಿಗೂ ಅವನೇ ಆಶ್ರಯ ಕೊಟ್ಟಿದ್ದನು, ಕೊಟ್ಟಿದ್ದಾನೆ, ಮುಂದೆಯೂ ಕೊಡುತ್ತಾನೆ. ನಿತ್ಯವೂ ಅವನ ದರ್ಶನ ಮಾಡಿ, ಒಮ್ಮೊಮ್ಮೆ ತಿರುಪತಿಯ ಶ್ರೀ ವೆಂಕಟೇಶನ (ಬಾಲಾಜಿ) ಹಾಗೂ ಕಾಂಚೀಪುರದ ಶ್ರೀ ವರದರಾಜನ ದರ್ಶನ ಮಾಡಿ. ಶ್ರೀ ರಂಗವೇ

ನಾರಾಯಣನ ವಾಸಸ್ಥಳ, ತಿರುಪತಿಯೇ ನಾರಾಯಣನ ಪಾದಕಮಲಗಳನ್ನು ದೊರಕಿಸಿ ಕೊಡುವ ಶ್ರೇಷ್ಠ ಶ್ಲೋಕ, ಕಾಂಚೀಪುರವೇ ಮುಕ್ತಿಯನ್ನು ಕೊಡುವ ಮಹಾಮಂತ್ರ.

ನಂತರ ಯಾಮುನರು ತಮ್ಮ ಶಿಷ್ಯರಾದ ಮಹಾಪೂರ್ಣರಿಗೂ ಹಾಗೂ ತಿರುಕ್ಕೋಟಿಯಾರ್ ನಂಬಿಯರಿಗೂ ಆತ್ಮಹತ್ಯೆ ಮಾಡಿಕೊಳ್ಳಬೇಡಿ, ಅದು ಮಹಾಪಾಪವೆಂದು ತಿಳಿಸಿ, ಅವರನ್ನೂ ಉಳಿದ ಶಿಷ್ಯರನ್ನು ಉದ್ದೇಶಿಸಿ ಹೇಳಿದರು.

**ಯಾಮುನರು:** ಇದು ನನ್ನ ಕಡೆಯ ಬುದ್ಧಿವಾದ. ನೀವು ಸ್ವಾಮಿಯ ಪಾದಗಳಲ್ಲಿ ಹೂಗಳನ್ನು ಅರ್ಪಿಸಿ, ನನ್ನ ಧರ್ಮಬೋಧೆಯನ್ನು ಅನುಸರಿಸಿ.

ಇಷ್ಟನ್ನು ತಿಳಿಸಿ ತನ್ನ ಶಿಷ್ಯರ ರಕ್ಷಣೆಯನ್ನು ತಿರುವರಂಗರಿಗೆ ವಹಿಸಿದರು.

ಆಳವಂದಾರರು ಒಂದೆರಡು ದಿನಗಳಲ್ಲಿ ಸ್ವಲ್ಪ ಮಟ್ಟಿಗೆ ಚೇತರಿಸಿಕೊಂಡರು. ಆಗ ಅವರು ರಂಗನಾಥನ ಉತ್ಸವದಲ್ಲಿ ಭಾಗವಹಿಸಿ, ಸ್ವಾಮಿಯ ಪ್ರಸಾದವನ್ನು ಸ್ವೀಕರಿಸಿ, ಆನಂದದಿಂದ ಮಠಕ್ಕೆ ಹಿಂದಿರುಗಿದರು.

ಅದೇ ಸಮಯಕ್ಕೆ ಸರಿಯಾಗಿ ಕಾಂಚೀಪುರದಿಂದ ಇಬ್ಬರು ಬ್ರಾಹ್ಮಣರು ಬಂದರು. ಅವರನ್ನು ಸಂಧಿಸಿ ಯಾಮುನರಿಗೆ ಅತ್ಯಾನಂದವಾಯಿತು. ರಾಮಾನುಜರ ಬಗ್ಗೆ ವಿಚಾರಿಸಿದರು.

ಆಗ ಅವರು ಯಾಮುನಾಚಾರ್ಯರಿಗೆ ತಿಳಿಸಿದರು "ರಾಮಾನುಜರು ಯಾದವ ಪ್ರಕಾಶರ ಶಿಷ್ಯವೃತ್ತಿಯನ್ನು ಬಿಟ್ಟುಬಿಟ್ಟರು. ಈಗ ತಾವೇ ಸ್ವಾಧ್ಯಾಯ ಮಾಡಿಕೊಂಡಿದ್ದಾರೆ. ಕಾಂಚೀಪೂರ್ಣರ ಅನುಜ್ಞೆಯಂತೆ ನಿತ್ಯವೂ ಸಾಲಬಾವಿಯಿಂದ ಸ್ವಾಮಿಯ ಪೂಜೆಗಾಗಿ ಒಂದು ಕೊಡ ನೀರನ್ನು ತೆಗೆದುಕೊಂಡು ಹೋಗಿ ಕೊಡುತ್ತಿದ್ದಾರೆ".

ಈ ಮಾತುಗಳನ್ನು ಕೇಳಿ ಯಾಮುನರಿಗೆ ಎಲ್ಲಿಲ್ಲದ ಆನಂದವಾಯಿತು. ಕೂಡಲೇ ತನ್ನ ಇಷ್ಟಾರ್ಥವನ್ನು ಈಡೇರಿಸಿದ್ದಕ್ಕೆ ಸ್ವಾಮಿಯ ಮೇಲೆ ಎಂಟು ವಂದನ ಸ್ತುತಿಗಳನ್ನು ರಚಿಸಿದರು, ಕೂಡಲೇ ಮಹಾಪೂರ್ಣರನ್ನು ಕರೆದು ಹೇಳಿದರು – "ಮಗು, ತಡಮಾಡದೆ ರಾಮಾನುಜರನ್ನು ಇಲ್ಲಿಗೆ ಕರೆತಾ. ಆತನು ನಮ್ಮೊಂದಿಗಿರಲಿ".

ಮಹಾಪೂರ್ಣರು ಗುರುಗಳ ಪಾದಗಳಿಗೆ ನಮಸ್ಕರಿಸಿ, ಕೂಡಲೇ ಕಾಂಚೀಪುರಕ್ಕೆ ಪ್ರಯಾಣ ಬೆಳೆಸಿದರು.

ಈಕಡೆ ಮಠದಲ್ಲಿ ಆಳವಂದಾರರು ಪುನಃ ರೋಗಗ್ರಸ್ತರಾದರು. ಆಗ ಅವರು ಎಲ್ಲ ಗೃಹಸ್ಥ ಶಿಷ್ಯರುಗಳನ್ನು ಕರೆಸಿದರು. ದೇವಸ್ಥಾನಕ್ಕೆ ಹೋಗಿ ಶ್ರೀ ರಂಗನಾಥನ ಕಡೆಯ ಪ್ರಸಾದವನ್ನು ಸ್ವೀಕರಿಸಿದರು. ಮಠಕ್ಕೆ ಬಂದರು: ಎಲ್ಲರಲ್ಲೂ ತಾನೇನಾದರೂ ತಪ್ಪು ಮಾಡಿದ್ದರೆ ಕ್ಷಮಿಸಬೇಕೆಂದು ಕೇಳಿಕೊಂಡರು. ತಿರುವರಂಗರಿಗೆ ಮಠದ ತನ್ನ ಶಿಷ್ಯರ ಅಧಿಕಾರ ವಹಿಸಿಕೊಟ್ಟರು.

ಗೃಹಸ್ಥರೆಲ್ಲಾ ಊಟಕ್ಕಾಗಿ ಅವರ ಮನೆಗಳಿಗೆ ಹೋದ ಸಮಯದಲ್ಲಿ ಆಳವಂದಾರರು ಪದ್ಮಾಸನದಲ್ಲಿ ಕುಳಿತರು. ತನ್ನ ಮನಸ್ಸನ್ನು ಹೃದಯದಲ್ಲಿ ನಿಲ್ಲಿಸಿದ್ದರು. ಆ ಸಮಯದಲ್ಲಿ ಶಿಷ್ಯರೆಲ್ಲಾ ದೇವರ ಭಜನೆ ಮಾಡ ತೊಡಗಿದರು.

**ರಾಗ-ಶ್ರೀ** **ಆದಿತಾಳ**

ರಂಗನ ಭಜಿಸೊ ಶ್ರೀ । ರಂಗನ ಭಜಿಸೊ ।
ರಂಗನ ಭಜಿಸೆಲೋ । ಮೂಢಮತೇ ।।ಪ।।
ಅಂತಿಮ ಕಾಲವು । ಹತ್ತಿರಬಂದಾಗ ಆ ।
ನಂದದ ಮುಕ್ತಿಯ । ಕೊಡುವನು ರಂಗನು ।।೧।।

ಕಮಲದೆಲೆಯ ಮೇ । ಲಿರುವ ನೀರಿನಂತೆ ।
ಭ್ರಮೆಯ ಜೀವನವಿದು । ಸ್ಥಿರವಲ್ಲವೆಂದು ತಿಳಿಯೋ ।।
ಮಮಕಾರ ಖಿಜಿನಗ । ಗಳಿಂದ ಕೂಡಿದ ಈ ।
ಸಮಸ್ತಲೋಕವು । ಶೋಕ ಭರಿತವು ।।೨।।

ಹೀಗೆ ಶ್ರೀ ರಂಗನ ಭಜನೆ ಮಾಡುತ್ತ ಎಲ್ಲರೂ ಭಕ್ತಿ ಪರವಶರಾಗಿ ಮೈಮರೆತರು. ಅಲೌಕಿಕ ಶಕ್ತಿಯೊಂದು ಅವರನ್ನು ಆವರಿಸಿತು.

ಆಳವಂದಾರರು ಅವರ ಮನಸ್ಸನ್ನು ಭ್ರೂ ಮಧ್ಯದಲ್ಲಿ ನಿಲ್ಲಿಸಿದರು. ಆನಂದ ಬಾಷ್ಪಗಳು ಅವರ ಕಣ್ಣುಗಳಂಚಿನಿಂದ ಹರಿದವು. ಅಂತಿಮವಾಗಿ ಬ್ರಹ್ಮರಂಧ್ರದ ಮೂಲಕ ಪ್ರಾಣವನ್ನು ಬಿಟ್ಟು ಶ್ರೀ ರಂಗನಾಥನ ದಿವ್ಯಪಾದಗಳನ್ನು ಸೇರಿದರು.

ಎಲ್ಲರಿಗೂ ಸಿಡಿಲು ಬಡಿದಂತಾಯಿತು. ಕೆಲವರು ಮೂರ್ಛೆ ಹೋದರು.

ಸ್ವಲ್ಪ ಸಮಯದ ಮೇಲೆ ಆಳವಂದಾರರ ಚಿಕ್ಕ ವಯಸ್ಸಿನ ಮಗ ಪೂರ್ಣನೊಡ ಗೂಡಿ ಎಲ್ಲ ಶಿಷ್ಯರೂ ಉತ್ತರ ಕ್ರಿಯಾದಿಗಳಿಗೆ ಸಿದ್ಧತೆ ನಡೆಸಿದರು. ಶವಸಂಸ್ಕಾರ ಮಾಡಿ ಕಾವೇರಿ ತೀರಕ್ಕೆ ಸಮೀಪದಲ್ಲಿ ಆಳವಂದಾರರ ಪಾರ್ಥಿವ ಶರೀರವನ್ನು ಬೃಂದಾವನಸ್ಥವಾಗಿಸಬೇಕೆಂದು ಎಲ್ಲ ಸಿದ್ಧತೆಗಳನ್ನು ಮಾಡಿಕೊಂಡರು.

– ❋ –

# 9

# ಪಾರ್ಥಿವ ಶರೀರ ದರ್ಶನ

ಮಹಾಪೂರ್ಣರು ಶ್ರೀ ರಂಗದಿಂದ ಸತತ ನಾಲ್ಕು ದಿನಗಳ ಪ್ರಯಾಣ ಮಾಡಿ ಕಾಂಚೀಪುರವನ್ನು ತಲುಪಿದರು. ಅಲ್ಲಿ ಶ್ರೀ ವರದರಾಜ ಸ್ವಾಮಿಯ ದರ್ಶನ ಮಾಡಿ, ಅಲ್ಲಿಯೇ ಮಹಾತ್ಮ ಕಾಂಚೀಪೂರ್ಣರನ್ನು ಸಂಧಿಸಿದರು. ಅಲ್ಲಿಗಾಗಲೇ ಸಂಜೆಯಾಗಿತ್ತು.

ಕಾಂಚೀಪೂರ್ಣರು ಮಹಾಪೂರ್ಣರಿಂದ ವಿಷಯವೆಲ್ಲವನ್ನು ತಿಳಿದ ನಂತರ ಅವರು ಮಹಾಪೂರ್ಣರನ್ನು ಆ ರಾತ್ರಿ ತಮ್ಮ ಆಶ್ರಮದಲ್ಲಿ ತಂಗುವಂತೆ ತಿಳಿಸಿದರು.

ಬೆಳಗಾಗುತ್ತಲೇ ಇಬ್ಬರೂ ಸಾಲ-ಬಾವಿಯ ಕಡೆ ಹೋದರು. ಅಲ್ಲಿ ರಾಮಾನುಜರು ನೀರಿನ ಕೊಡವನ್ನು ಹೊತ್ತು ತರುತ್ತಿದ್ದರು.

ಕಾಂಚೀಪೂರ್ಣರು ರಾಮಾನುಜರನ್ನು ಭೇಟಿ ಮಾಡಿ ಅವರಿಗೆ ಈ ವಿಷಯವನ್ನು ತಿಳಿಸಿ, ಅವರು ದೇವಸ್ಥಾನಕ್ಕೆ ಹೋಗಬೇಕೆಂದು ಹೇಳಿ ಹೊರಟು ಹೋದರು.

ದೂರದಿಂದಲೇ ರಾಮಾನುಜರ ದೈವಿಕ ಸೌಂದರ್ಯವನ್ನು ನೋಡಿ, ದೇವರೇ ಮಾನವನ ರೂಪದಲ್ಲಿ ಬಂದಿದ್ದಾನೆಂದು ಮಹಾಪೂರ್ಣರು ಭಾವಿಸಿದರು.

ಅವರನ್ನು ನೋಡುತ್ತಲೇ ತಾನೇ ತಾನಾಗಿ ಮಹಾಪೂರ್ಣರ ಬಾಯಿಯಿಂದ ದೇವರ ಸ್ತುತಿ ಹೊರಬಂದಿತು –

**ವಶೀವದಾನ್ಯೋಗುಣವಾನ್ನೃಜು ಶ್ಶುಚಿರ್ಮೃದು**
**ರ್ದಯಾಲುರ್ಮಧುರಃ ಸ್ಥಿರಸ್ಸಮಃ ।**

**ಕೃತೀಕೃತಜ್ಞಸ್ತ್ವಮಸಿ ಸ್ವಭಾವತಸ್ಸಮಸ್ತಕಲ್ಯಾಣ**
**ಗುಣಾಮೃತೋದಧಿಃ ॥** **॥8॥ (ಸ್ತೋತ್ರರತ್ನ)**

"ನೀನು ಸ್ವಭಾವತಃ ಶಕ್ತಿಶಾಲಿ, ಮಹಾನುಭಾವ, ಒಳ್ಳೆಯವ, ಶುಚಿಭೂತ, ಮೃದು, ದಯಾಳು, ಮಧುರ, ಗಾಂಭೀರ್ಯವುಳ್ಳವ, ಸಮಭಾವದವ, ಕೃತಕೃತ್ಯನು, ಕೃತಜ್ಞನು, ಸಮಸ್ತ ಕಲ್ಯಾಣ ಗುಣಗಳ ಅಮೃತ ಸಾಗರನೂ, ಆಗಿರುವೆ".

ರಾಮಾನುಜರು ಸಮೀಪಕ್ಕೆ ಬಂದಾಗ ಆನಂದ ಭರಿತರಾದ ಮಹಾಪೂರ್ಣರು ಅವರ ಪಾದಗಳಿಗೆ ಭಕ್ತಿಯಿಂದ ನಮಸ್ಕರಿಸಿ ಹೀಗೆ ಸ್ತುತಿಸಿದರು.

**ನಮೋ ನಮೋ ವಾಙ್ಮನಸಾತಿ ಭೂಮಯೇ**
**ನಮೋ ನಮೋ ವಾಙಮನಸೈಕ ಭೂಮಯೇ ।**
**ನಮೋ ನಮೋ ಽನಂತ ಮಹಾವಿಭೂತಯೇ**
**ನಮೋ ನಮೋ ನಮೋಽನಂತದಯೈಕ ಸಿಂಧವೇ** **॥೩॥**

"ನಿನಗೆ ನನ್ನ ಅನಂತ ನಮಸ್ಕಾರಗಳು. ನೀನು ವಾಙ್‌ಮನಗಳಿಗೆ ದೂರನು, ನಿನಗೆ ಬಾರಿ ಬಾರಿ ನಮಸ್ಕಾರಗಳು, ನೀನೇ ವಾಙ್‌ಮನಗಳಿಗೆ ಆಧಾರನು, ನಿನಗೆ ಅನಂತ ನಮಸ್ಕಾರಗಳು, ನೀನು ಅನಂತ, ಅಪೌರುಷೇಯ ಶಕ್ತಿಯುಳ್ಳವನು, ನಿನಗೆ ಅನಂತ ನಮಸ್ಕಾರಗಳು, ಮೇರೆಯಿಲ್ಲದ ದಯೈಕ ಸಿಂಧುವಾದ ನಿನಗೆ, ಅನಂತ ನಮಸ್ಕಾರಗಳು.

ಮಹಾಪೂರ್ಣರು ಇದೇ ರೀತಿ ಯಾಮುನರ ಅನೇಕ ಸ್ತೋತ್ರಗಳನ್ನು ಹಾಡ ತೊಡಗಿದರು. ರಾಮಾನುಜರು ಭಿತ್ತಿಚಿತ್ರದಂತೆ ನಿಂತು ಕೇಳುತ್ತಿದ್ದರು.

ನಂತರ ರಾಮಾನುಜರು ಅತಿವಿನೀತರಾಗಿ, ಮಧುರ ಧ್ವನಿಯಲ್ಲಿ ಪೂಜನೀಯ ವೃದ್ಧ ಸಂತರನ್ನು ಕೇಳಿದರು.

**ರಾಮಾನುಜರು:** ಪೂಜ್ಯರೇ, ಈ ಅದ್ವಿತೀಯ ಸ್ತೋತ್ರಗಳನ್ನು ರಚಿಸಿದವರಾರು? ಅವರಿಗೆ ನನ್ನ ಅನಂತ ನಮಸ್ಕಾರಗಳು. ತಾವೂ ಸಹ ಇಂದಿನ ಪ್ರಾತಃಕಾಲವನ್ನು ಕಲ್ಯಾಣಕರವನ್ನಾಗಿ ಮಾಡಿದ್ದೀರಿ. ತಮ್ಮ ಪವಿತ್ರಬಾಯಿಯಿಂದ ಈ ಸ್ತೋತ್ರಗಳನ್ನು ಕೇಳಿ ನಾನೂ ಸಹ ಧನ್ಯನಾದೆ. ನನ್ನ ಅನಂತ ವಂದನೆಗಳು.

**ಮಹಾಪೂರ್ಣರು:** ಈ ಶ್ಲೋಕಗಳನ್ನು ನನ್ನ ಸದ್ಗುರುಗಳಾದ ಶ್ರೀ ಯಾಮುನಾಚಾರ್ಯರು ರಚಿಸಿದ್ದಾರೆ.

ಯಾಮುನಾಚಾರ್ಯರ ಹೆಸರು ಕೇಳುತ್ತಲೇ ಚಿಂತಾಕ್ರಾಂತರಾಗಿ

**ರಾಮಾನುಜರು:** ಪೂಜ್ಯರೇ, ಆ ಮಹರ್ಷಿಗಳು ರೋಗಗ್ರಸ್ತರಾಗಿದ್ದಾರೆಂದು ಕೇಳಿದ್ದೆ. ಈಗ ಆರೋಗ್ಯವಂತರಾಗಿದ್ದಾರೆಯೇ । ತಾವು ಆ ಪುಣ್ಯ ಪುರುಷರ ಪಾದದಾಶ್ರಯವನ್ನು ಬಿಟ್ಟು ಎಷ್ಟು ಸಮಯವಾಯಿತು.

**ಮಹಾಪೂರ್ಣರು:** ಅವರ ಅನುಜ್ಞೆಯಂತೆ ನಾನು ನೇರವಾಗಿ ಇಲ್ಲಿಗೆ, ತಮ್ಮಲ್ಲಿಗೆ ಬಂದಿದ್ದೇನೆ. ನಾನು ಅವರನ್ನು ಬಿಟ್ಟು ಬರುವಾಗ, ಅವರು ಚೇತರಿಸಿಕೊಂಡಿದ್ದರು.

**ರಾಮಾನುಜರು:** ಪೂಜ್ಯರೇ, ತಾವು ಇಲ್ಲಿಗೆ ಬಂದ ಕಾರಣ ಕೇಳಬಹುದೇ? ಈ ದಿನದ ಭಿಕ್ಷೆಯನ್ನು ತಮಗೆ ಯಾವುದೇ ಅಭ್ಯಂತರವಿಲ್ಲದಿದ್ದರೆ, ಇವನ ಮನೆಯಲ್ಲಿ. ಸ್ವೀಕರಿಸಿ, ಧನ್ಯನನ್ನಾಗಿ ಮಾಡಿರಿ.

**ಮಹಾಪೂರ್ಣರು:** ಮಹರ್ಷಿ ಯಾಮುನಾಚಾರ್ಯರು ಯಾರ ಬಗ್ಗೆ ಸದಾ ಯೋಚಿಸುತ್ತಿದ್ದಾರೆಯೋ, ಅವರು ಎಂತಹ ಭಾಗ್ಯಶಾಲಿ ಹಾಗೂ ಧನ್ಯರು. ಓ ಮಹಾನುಭಾವ, ನನ್ನ ಗುರುವಿನ ಆಜ್ಞೆಯಂತೆ ತಮ್ಮಲ್ಲಿಗೆ ಬಂದಿದ್ದೇನೆ.

**ರಾಮಾನುಜರು:** (ಚಕಿತರಾಗಿ) ಆ ಪರಮ ಪುರುಷರು ನನ್ನನ್ನು, ಅತ್ಯಲ್ಪನನ್ನು ನೆನಪು ಮಾಡಿಕೊಂಡರೆ !

**ಮಹಾಪೂರ್ಣರು:** "ನನ್ನ ಸದ್ಗುರುಗಳು, ಇತ್ತೀಚಗೆ, ಪದೇ ಪದೇ ಅಸ್ವಸ್ಥರಾಗುತ್ತಿರುತ್ತಾರೆ. ಸದ್ಯದಲ್ಲಿ ಸ್ವಲ್ಪ ಚೇತರಿಸಿಕೊಂಡಿದ್ದರು. ತಮ್ಮನ್ನು ಅವರ ಬಳಿ ಕರೆದುಕೊಂಡು ಹೋಗಲೋಸುಗವೇ ನಾನು ಬಂದಿದ್ದೇನೆ, ತಾವು ಅವರ ಇಚ್ಛೆಯನ್ನು ಪೂರೈಸುವುದಾದರೆ, ಕೂಡಲೇ ದರ್ಶನಕ್ಕಾಗಿ ಹೊರಡಿ".

ಈ ವಾತ್ಸಲ್ಯ ಭರಿತ ಮಾತುಗಳನ್ನು ಕೇಳಿ ರಾಮಾನುಜರು ಸಂತೋಷಭರಿತರಾಗಿ

**ರಾಮಾನುಜರು:** ಈ ಕೊಡವನ್ನು ದೇವಸ್ಥಾನಕ್ಕೆ ಕೊಟ್ಟು ಬರುತ್ತೇನೆ. ನಂತರ ನಾವು ಶ್ರೀರಂಗಕ್ಕೆ ತೆರಳೋಣ.

ಇಷ್ಟನ್ನು ಹೇಳಿ ರಾಮಾನುಜರು ದೇವಸ್ಥಾನದ ಕಡೆ ಬೇಗ, ಬೇಗ ಹೆಜ್ಜೆ ಹಾಕಿದರು. ರಾಮಾನುಜರಿಗೆ ಯಾಮುನಾಚಾರ್ಯರ ಮೇಲಿದ್ದ ನೈಜವಾದ ಅನನ್ಯ ಭಕ್ತಿಯನ್ನು ಕಂಡು ಮಹಾಪೂರ್ಣರು ಬೆರಗಾದರು – ಇಂತಹ ಪುಣ್ಯಾತ್ಮನೊಡನೆ ಮಾತನಾಡಿದುದೇ ಅವರ ಭಾಗ್ಯವೆಂದು ತಿಳಿದು ಹೀಗೆ ಸ್ತುತಿಸಿದರು.

**ತವದಾಸ್ಯ ಸುಖೈಕ ಸಂಗಿನಾಂ ಭವನೇಷ್ವಸ್ತ್ವಪಿ**
**ಕೀಟಜನ್ಮಮೇ । ಇತರಾ ವಸತೇಷು ಮಾಸ್ಮ**
**ಭೂದಪಿಮೇ ಜನ್ಮ ಚತುರ್ಮುಖಾತ್ಮನಾ ॥೫೫॥**
**(ಸ್ತೋತ್ರರತ್ನ)**

ನಿನ್ನ ದಾಸ್ಯವನ್ನು ಪ್ರೀತಿಯಿಂದ ಮಾಡುವವರ ಮನೆಯಲ್ಲಿ ಒಂದು ಕೀಟವಾಗಿಯಾದರೂ ಹುಟ್ಟಲು ಬಯಸುತ್ತೇನೆಯೇ ಹೊರತು ಬೇರೆಯವರ ಕುಟುಂಬದಲ್ಲಿ ಚತುರ್ಮುಖ ಬ್ರಹ್ಮನಾಗಿ ಹುಟ್ಟಲೂ ಸಹ ಬಯಸುವುದಿಲ್ಲ.

ರಾಮಾನುಜರು ನೀರಿನ ಕೊಡವನ್ನು ದೇವಸ್ಥಾನದಲ್ಲಿರಿಸಿ, ಕೂಡಲೇ ಮಹಾಪೂರ್ಣರೊಂದಿಗೆ ಹೊರಡಲು ಸಿದ್ಧರಾದರು.

**ಮಹಾಪೂರ್ಣರು:** ತಾವು ಮನೆಯವರಿಗೆ ತಿಳಿಸದೆ, ಮನೆಗೆ ಬೇಕಾದ ವಸ್ತುಗಳನ್ನು ಒದಗಿಸದೆ, ಇದ್ದಕ್ಕಿದ್ದಂತೆ ಹೊರಟು ಬಿಟ್ಟಿರಲ್ಲಾ?

**ರಾಮಾನುಜರು:** ಮೊದಲು ದೇವರ ಮತ್ತು ಅವನ ಭಕ್ತರ ಆಜ್ಞೆಗೆ ತಲೆ ಬಾಗಬೇಕು, ನಂತರ ಮನೆಯ ಕಡೆ ಗಮನ.

ರಾಮಾನುಜರ ಈ ಮಾತನ್ನು ಕೇಳಿ ಆನಂದಭರಿತರಾಗಿ ಮಹಾಪೂರ್ಣರು ರಾಮಾನುಜರನ್ನು ಅಪ್ಪಿಕೊಂಡರು. ನಂತರ ಆ ಪುಣ್ಯಾತ್ಮರ ದರ್ಶನಕ್ಕಾಗಿ ತ್ವರಿತವಾಗಿ ಶ್ರೀರಂಗಕ್ಕೆ ಇಬ್ಬರೂ ತೆರಳಿದರು. ನಾಲ್ಕು ದಿನಗಳಲ್ಲಿ ತಿರುಚಿನಾಪಲ್ಲಿಯನ್ನು ಮುಟ್ಟಿದರು, ತಡ ಮಾಡದೆ ಕಾವೇರಿ ನದಿಯನ್ನು ದಾಟಿ ಶ್ರೀರಂಗವನ್ನು ತಲುಪಿದರು. ಮಠದ ಕಡೆ ಧಾವಿಸಿದರು. ಅಲ್ಲಿ ಭಾರಿಜನಸ್ತೋಮವಿತ್ತು. ಅಲ್ಲಿ ಒಬ್ಬರನ್ನು ಕೇಳಲಾಗಿ ಆತ ಹೇಳಿದನು "ಮಹಾತ್ಮ ಆಳವಂದಾರರು ಇಹಲೋಕವನ್ನು ತ್ಯಜಿಸಿ ಪ್ರಭುವಿನ ಪವಿತ್ರ ವೈಕುಂಠವನ್ನು ಸೇರಿದರು".

ಈ ಮಾತನ್ನು ಕೇಳುತ್ತಲೇ ರಾಮಾನುಜರು ಮೂರ್ಛಿತರಾದರು, ಮಹಾಪೂರ್ಣರು ತಲೆಚಚ್ಚಿಕೊಂಡು ಜೋರಾಗಿ ಅಳತೊಡಗಿದರು.

ಸ್ವಲ್ಪ ಹೊತ್ತಿನ ನಂತರ ಮಹಾಪೂರ್ಣರು ಸಮಾಧಾನ ತಂದುಕೊಂಡು ರಾಮಾನುಜರತ್ತ ನೋಡಿದರು ಅವರಿಗಿನ್ನು ಪ್ರಜ್ಞೆ ಬಂದಿರಲಿಲ್ಲ. ಆಗ ಅವರಿಗೆ ಶೈತ್ಯೋಪಚಾರ ಮಾಡಿದರು.

ಇಬ್ಬರೂ ಚೇತರಿಸಿಕೊಂಡ ಕೂಡಲೇ ಯಾಮುನರ ಅಂತಿಮದರ್ಶನ ಪಡೆಯಲು ಹೊರಟರು.

ಮಹಾಪೂರ್ಣರು ಆಳವಂದಾರರ ಮೃತ ದೇಹದ ಪಾದಗಳನ್ನು ಹಿಡಿದು ಕಣ್ಣೀರಿಡುತ್ತಾ ಪ್ರಲಾಪಿಸಿದರು. ರಾಮಾನುಜರು ಸ್ತಂಭದಂತೆ ಅಚಲವಾಗಿ ನಿಂತು ಬಿಟ್ಟರು.

ರಾಮಾನುಜರು ಆಳವಂದಾರರ ಶವವನ್ನೇ ದಿಟ್ಟಿಸಿ ನೋಡಲಾಗಿ ಆಳವಂದಾರರ ಬಲಗೈಯ ಮೂರು ಬೆರಳುಗಳು ಮಡಿಚಿಕೊಂಡಿರುವುದು ಕಾಣಿಸಿತು.

ರಾಮಾನುಜರು ಪಕ್ಕದವರನ್ನು ಕೇಳಿದರು – "ಈ ಮೂರು ಬೆರಳುಗಳು ಮೊದಲಿನಿಂದಲೂ ಮಡಿಚಿಕೊಂಡಿದ್ದವೇ?

ಶಿಷ್ಯರು ಉತ್ತರಿಸಿದರು – "ಇಲ್ಲ ಮೊದಲು ಅವರ ಬೆರಳುಗಳು ನೇರವಾಗಿಯೇ ಇದ್ದವು, ಈಗ ಅವು ಮಡಿಸಿಕೊಂಡಿರುವುದಕ್ಕೆ ಕಾರಣ ತಿಳಿಯದೆಂದರು".

ಆಗ ರಾಮಾನುಜರು ಅಲ್ಲಿ ಸೇರಿದ್ದ ಜನರೆಲ್ಲರಿಗೂ ಕೇಳಿಸುವಂತೆ ಘೋಷಿಸಿದರು.

**ಅಹಂ ವಿಷ್ಣುಮತೇ ಸ್ಥಿತ್ವಾಜನಾನಜ್ಞಾನಮೋಹಿತಾನ್ ।**
**ಪಂಚಸಂಸ್ಕಾರಸಂಪನ್ನಾನ್ ದ್ರಾವಿಡಾಮ್ನಾಯಪಾರಗಾನ್ ।**
**ಪ್ರಪತ್ತಿ ಧರ್ಮನಿರತಾನ್ ಕೃತ್ವಾರಕ್ಷಾಮಿ ಸರ್ವದಾ ॥**
**(ಪ್ರಪನ್ನಾಮೃತ)**

"ವೈಷ್ಣವ ಧರ್ಮದಲ್ಲಿ ಸದಾ ಇದ್ದುಕೊಂಡು ನಾನು ಅಜ್ಞಾನಿಗಳನ್ನು ರಕ್ಷಿಸುತ್ತೇನೆ. ಅವರಿಗೆ ಪಂಚ ಸಂಸ್ಕಾರ ಮಾಡಿ, ದ್ರಾವಿಡ ವೇದಗಳಲ್ಲಿ ಅವರನ್ನು ಪಾರಂಗತರನ್ನಾಗಿ ಮಾಡಿ, ಪ್ರಪತ್ತಿ ಮಾರ್ಗವನ್ನು ಬೋಧಿಸಿ, ಶ್ರೀಮನ್ನಾರಾಯಣನ ಶರಣಾಗತರನ್ನಾಗಿ ಮಾಡುತ್ತೇನೆ"

ಈ ರೀತಿ ಘೋಷಣೆ ಮಾಡುತ್ತಲೇ ಆಳವಂದಾರರ ಒಂದು ಬೆರಳು ನೆಟ್ಟಗಾಯಿತು.

**ಸಂಗೃಹ್ಯ ನಿಖಿಲಾನರ್ಥಾನ್ ತತ್ವಜ್ಞಾನಪರಂ ಶುಭಂ ।**
**ಶ್ರೀಭಾಷ್ಯಂಚ ಕರಿಷ್ಯಾಮಿ ಜನರಕ್ಷಣ ಹೇತುನಾ ॥**
**(ಪ್ರಪನ್ನಾಮೃತ)**

"ಎಲ್ಲಾ ವ್ಯಾಖ್ಯಾನಗಳನ್ನು ಸಂಗ್ರಹಿಸಿ, ಜನರ ಒಳ್ಳೆಯದಕ್ಕಾಗಿ, ಸತ್ಯಜ್ಞಾನವನ್ನು ಎತ್ತಿ ಹಿಡಿಯುವ ಶುಭವಾದ ಶ್ರೀಭಾಷ್ಯವನ್ನು ರಚಿಸುತ್ತೇನೆ".

ಹೀಗೆಂದು ಘೋಷಿಸಿದ ಕೂಡಲೇ ಎರಡನೆಯ ಬೆರಳು ನೇರವಾಗಿ ನಿಂತಿತು.

**ಜೀವೇಶ್ವರಾದೀನ್ ಲೋಕೇಭ್ಯಃ ಕೃಪಯಾ ಯಃ**
**ಪರಾಶರಃ । ಸದರ್ಶಯನ್ ತತ್ಸ್ವಭಾವಾನ್ ತದುಪಾಯಗತೀಸ್ತಥಾ ॥**
**ಪುರಾಣರತ್ನಂ ಸಂಚಕ್ರೇ ಮುನಿವರ್ಯಃ ಕೃಪಾನಿಧಿಃ ।**
**ತಸ್ಯ ನಾಮ್ನಾ ಮಹಾ ಪ್ರಾಜ್ಞವೈಷ್ಣವಸ್ಯಚ ಕಸ್ಯಚಿತ್ ।**
**ಅಭಿದಾನಂ ಕರಿಷ್ಯಾಮಿ ನಿಷ್ಕ್ರಯಾರ್ಥಂ ಮುನೇರಹಂ ॥**
**(ಪ್ರಪನ್ನಾಮೃತ)**

"ಮುನಿಪರಾಶರರು ಕರುಣೆಯಿಂದ ಪುರಾಣಗಳಲ್ಲಿ ರತ್ನದೋಪಾದಿಯಲ್ಲಿರುವ ವಿಷ್ಣು ಪುರಾಣವನ್ನು ರಚಿಸಿದರು. ಅದರಲ್ಲಿ ಅವರು ಈಶ್ವರನ, ಜೀವಿಗಳ, ವಿಶ್ವದ ಸ್ವಭಾವಗಳೇನೆಂಬುದನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ, ಅವುಗಳ ಪ್ರಗತಿ ಹೇಗೆಂಬುದನ್ನೂ ವಿವರಿಸಿದ್ದಾರೆ. ಈ ಕಾರಣದಿಂದ ನಾನು ಒಬ್ಬ ಶ್ರೇಷ್ಠ ವಿದ್ವಾಂಸನಾದ ವೈಷ್ಣವನಿಗೆ ಮುನಿಪರಾಶರರ ಹೆಸರನ್ನಿಟ್ಟು ಅವರ ಋಣವನ್ನು ತೀರಿಸುತ್ತೇನೆ".

ಈ ಘೋಷಣೆಯಿಂದ ಮೂರನೆಯ ಬೆರಳೂ ಸಹ ನೇರವಾಗಿ ನಿಂತಿತು.

ರಾಮಾನುಜರ ಈ ಮೂರು ಶಪಥಗಳು ಪಾಠಾಂತರವಾಗಿವೆ. ಅದರ ಪ್ರಕಾರ –

1. ಯೋಗ್ಯರಾದ ವೈಷ್ಣವರಿಗೆ ವೇದವ್ಯಾಸ ಮತ್ತು ಪರಾಶರರೆಂದು ಹೆಸರಿಡುವುದು.
2. ನಮ್ಮಾಳ್ವಾರರ ತಿರುವಾಯ್ಮೊಳಿಗೆ ವ್ಯಾಖ್ಯಾನ ಬರೆಯುವುದು.
3. ವಿಶಿಷ್ಟಾದ್ವೈತ ಸಿದ್ಧಾಂತದ ಮೇಲೆ ಬ್ರಹ್ಮ ಸೂತ್ರಕ್ಕೆ ವ್ಯಾಖ್ಯಾನ ಬರೆಯುವುದು.

ರಾಮಾನುಜರು ಅಲ್ಲಿಂದ ದುಃಖಭರಿತರಾಗಿ ಶ್ರೀ ರಂಗನಾಥನ ದರ್ಶನವನ್ನು ಸಹ ಮಾಡದೆ ನೇರವಾಗಿ ಹೊರಟು ಕಾಂಚೀಪುರವನ್ನು ಸೇರಿದರು.

– ❋ –

# 10

## ದೀಕ್ಷಾ - ಸಂಸ್ಕಾರ

ಈ ದುರ್ದೈವಕ್ಕೆ ಸುಮಾರು ಆರು ತಿಂಗಳು ಮೊದಲೇ ರಾಮಾನುಜರು ಮತ್ತೊಂದು ಮಾನಸಿಕ ವೇದನೆಗೆ ತುತ್ತಾಗಿದ್ದರು. ಅವರ ತಾಯಿ ಕಾಂತಿಮತಿ ನಿಧನರಾಗಿದ್ದರು.

ರಕ್ಷಕಾಂಬಾಳ್ ರಾಮಾನುಜರ ಪತ್ನಿ, ಮನೆಗೆ ಯಜಮಾನಿಯಾದಳು. ನೋಡಲು ಚೆಲುವೆ, ಪತಿಗೆ ತಕ್ಕ ಪತ್ನಿಯೆನಿಸಿದ್ದಳು. ಆದರೆ ಹೊರ ಆಚಾರ-ವ್ಯವಹಾರಗಳಿಗೆ ಹೆಚ್ಚು ಗಮನ ಕೊಡುತ್ತಿದ್ದಳು.

ರಾಮಾನುಜರು ಶ್ರೀ ರಂಗದಿಂದ ಹಿಂದಿರುಗಿದ ಮೇಲೆ, ಗೃಹಕೃತ್ಯಗಳ ಕಡೆ ಗಮನಹರಿಸಲಿಲ್ಲ. ಇದು ಅವರ ಪತ್ನಿಗೆ ಸರಿಬೀಳಲಿಲ್ಲ.

ರಾಮಾನುಜರು ಹೆಚ್ಚು ಕಾಲವನ್ನು ಕಾಂಚೀಪೂರ್ಣರೊಂದಿಗೆ ಕಳೆಯುತ್ತಿದ್ದರು.

**ಕಾಂಚೀಪೂರ್ಣರು:** ಮಗು, ಮಾನಸಿಕ ವ್ಯಥೆಯನ್ನು ದೂರಮಾಡು. ಮೊದಲಿನಂತೆ ಶ್ರೀ ವರದರಾಜನ ಸೇವೆಯನ್ನು ಮಾಡು. ಅವನ ಕೃಪೆಯಿಂದ ಎಲ್ಲವೂ ಒಳ್ಳೆಯದಾಗುತ್ತೆ. ತನ್ನ ನಿಯೋಜಿತ ಕಾರ್ಯವನ್ನು ಮುಗಿಸಿಕೊಂಡು ಆಳವಂದಾರರು ಶ್ರೀ ವಿಷ್ಣುವಿನ ಪಾದಗಳನ್ನು ಸೇರಿ ಶಾಶ್ವತ ಸುಖವನ್ನನುಭವಿಸುತ್ತಿದ್ದಾರೆ. ಈಗ ಅವರ ಮುಂದೆ ಮಾಡಿದ ಶಪಥಗಳನ್ನು ಪೂರ್ಣಗೊಳಿಸುವುದು ನಿನ್ನ ಆದ್ಯಕರ್ತವ್ಯವಾಗಿದೆ.

**ರಾಮಾನುಜರು:** "ನನ್ನನ್ನು ದಯವಿಟ್ಟು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ, ತಮ್ಮ ಪಾದಗಳ ಆಶ್ರಯದಲ್ಲಿ ಶಾಂತಿ ಪಡೆಯಲು ಅವಕಾಶ ಮಾಡಿಕೊಡಿ" ಎಂದು ಪ್ರಾರ್ಥಿಸುತ್ತಾ ಅವರ ಪಾದಗಳಿಗೆರಗಿದರು.

**ಕಾಂಚೀಪೂರ್ಣರು:** (ರಾಮಾನುಜರನ್ನು ಮೇಲಕ್ಕೆ ಎತ್ತಿಕೊಂಡು) ನೀನು ಇಷ್ಟು ಅಶಾಂತನಾಗಬೇಡ. ನೀನು ಬ್ರಾಹ್ಮಣ ನಾನು ಶೂದ್ರ. ಬ್ರಾಹ್ಮಣನಿಗೆ ದೀಕ್ಷೆ ಕೊಡುವ ಅಧಿಕಾರ ಶೂದ್ರನಿಗಿಲ್ಲ. ಶೂದ್ರನು ಬ್ರಾಹ್ಮಣನ ಸಾಷ್ಟಾಂಗ ಪ್ರಣಾಮವನ್ನು ಸ್ವೀಕರಿಸಬಾರದು. ಶ್ರೀಮನ್ನಾರಾಯಣನೇ ಬಹಳ ಹಿಂದೆಯೇ ನಿನಗೆ ತಕ್ಕ ಗುರುವನ್ನು ಕಳುಹಿಸಿದ್ದಾನೆ. ಚಿಂತಿಸಬೇಡ". ಇಷ್ಟು ಹೇಳಿ ದೇವಸ್ಥಾನದ ಕಡೆ ಹೊರಟರು.

ರಾಮಾನುಜರು ಯೋಚಿಸಿದರು – "ಅವರ ಶಿಷ್ಯನಾಗಲು ನನಗೆ ಸರಿಯಾದ ಯೋಗ್ಯತೆ ಇಲ್ಲವೆಂದು ತೋರುತ್ತೆ. ಕಾಂಚೀಪೂರ್ಣರ ಉಚ್ಛಿಷ್ಟವನ್ನಾದರೂ ತೆಗೆದುಕೊಂಡು ನನ್ನ ಆತ್ಮವನ್ನು ಶುದ್ಧಮಾಡಿಕೊಳ್ಳಬೇಕು" ಎಂದು ಸಂಕಲ್ಪ ಮಾಡಿಕೊಂಡು, ಅವರನ್ನೇ ಹಿಂಬಾಲಿಸಿ, ಅವರನ್ನು ಪುನಃ ಕೇಳಿಕೊಂಡರು – "ತಾವು ನಾಳೆ ದಿನ ತಪ್ಪದೇ ನನ್ನ ಮನೆಗೆ ಊಟಕ್ಕೆ ದಯಮಾಡಿಸಬೇಕು".

ಕಾಂಚೀಪೂರ್ಣರು ರಾಮಾನುಜರ ಆಹ್ವಾನವನ್ನು ಒಪ್ಪಿಕೊಂಡರು. ಅವರು ಹೇಳಿದರು "ಪರಮಭಕ್ತರಾದ ನಿಮ್ಮ ಮನೆಯಲ್ಲಿ ಊಟ ಮಾಡುವುದರಿಂದ ನನ್ನ ರಜೋಮತ್ತು ತಮೋ ಗುಣಗಳು ದೂರವಾಗುತ್ತವೆ. ನಾನೇ ಧನ್ಯ".

ಮನೆಗೆ ಬಂದು ರಾಮಾನುಜರು ತನ್ನ ಹೆಂಡತಿಗೆ ತಿಳಿಸಿದರು – "ನಾಳೆ ಮಧ್ಯಾಹ್ನ ಕಾಂಚೀಪೂರ್ಣರು ಊಟಕ್ಕೆ ಬರುತ್ತಿದ್ದಾರೆ. ನೀನು ರುಚಿಕರವಾದ ಊಟವನ್ನು ತಯಾರಿಸಬೇಕು".

ಹೆಂಡತಿಯು ಗಂಡನ ಆಣತಿಯಂತೆ ಊಟವನ್ನು ಸಿದ್ಧಪಡಿಸಿದಳು.

ರಾಮಾನುಜರು ಕಾಂಚೀಪೂರ್ಣರ ಆಶ್ರಮಕ್ಕೆ ಅವರನ್ನು ಕರೆತರಲು ಹೋದರು.

ಶ್ರೀ ವರದರಾಜನ ದಾಸರಾದ ಕಾಂಚೀಪೂರ್ಣರು ರಾಮಾನುಜರ ಮನೋಭೀಷ್ಟವನ್ನು ತಿಳಿದುಕೊಂಡು, ಬೇರೆ ದಾರಿಯಲ್ಲಿ ರಾಮಾನುಜರ ಮನೆ ಮುಟ್ಟಿದರು.

**ಕಾಂಚೀಪೂರ್ಣರು:** ಅಮ್ಮಾ ನಾನು ಈ ದಿನ ಬೇಗ ದೇವಸ್ಥಾನಕ್ಕೆ ಹೋಗಬೇಕು. ಅಡಿಗೆ ಪೂರ್ಣವಾಗಿ ಆಗದಿದ್ದರೂ ಸರಿಯೇ, ನನಗೆ ಈಗ ಇದ್ದದ್ದೇ ಬಡಿಸಿ, ನಾನು ಒಂದು ನಿಮಿಷವನ್ನು ವ್ಯರ್ಥವಾಗಿ ಕಳೆಯಲಾರೆ. ನಿಮ್ಮ ಪತಿದೇವರೆಲ್ಲಿ?

**ರಕ್ಷಕಾಂಬಾಳ್:** ಪೂಜ್ಯರೇ, ನನ್ನ ಯಾಜಮಾನರು ತಮ್ಮನ್ನೇ ಹುಡುಕಿಕೊಂಡು ತಮ್ಮ ಆಶ್ರಮದ ಕಡೆಯೇ ಹೋಗಿದ್ದಾರೆ. ಇನ್ನೇನು ಬಂದು ಬಿಡುತ್ತಾರೆ, ಸ್ವಲ್ಪ ನಿಧಾನಿಸಿ".

**ಕಾಂಚೀಪೂರ್ಣರು:** ಕ್ಷಮಿಸಿ ತಾಯಿ, ನನ್ನ ಹೊಟ್ಟೆಗಾಗಿ, ಸ್ವಾಮಿಯ ಸೇವೆಯಲ್ಲಿ ಒಂದು ಕ್ಷಣವನ್ನು ತಡ ಮಾಡಲಾರೆ".

ರಕ್ಷಕಾಂಬಾಳಳು ತಡ ಮಾಡಿದರೆ ಕಾಂಚೀಪೂರ್ಣರು ಊಟ ಮಾಡದೆ ಎಲ್ಲಿ ಹೋಗುವರೋ ಎಂದು ಭಯಪಟ್ಟು ಕೂಡಲೆ ಅವರನ್ನು ಆಸನದ ಮೇಲೆ ಕೂಡಿಸಿ, ನೀರು ತಂದಿಟ್ಟು, ಮಾಡಿದ್ದ ಭಕ್ಷ್ಯ ಭೋಜ್ಯಗಳೆಲ್ಲವನ್ನೂ ಪ್ರೀತಿಯಿಂದ ಉಣಬಡಿಸಿದಳು. ಕಾಂಚೀಪೂರ್ಣರು ಆನಂದವಾಗಿ ಊಟ ಮಾಡಿ "ತಾಯಿ ನಾನಿನ್ನು ಬರುತ್ತೇನೆಂದು ನಿಂತಲ್ಲಿಯೇ ನೆಲದ ಮೇಲೆ ನಮಸ್ಕರಿಸಿ" ಹೊರಟು ಹೋದರು.

ರಕ್ಷಕಾಂಬಾಳಳು ಉಳಿದ ಆಹಾರ ಪದಾರ್ಥಗಳನ್ನು ಒಬ್ಬ ಶೂದ್ರಳಿಗೆ ಕೊಟ್ಟು, ಅಡಿಗೆ ಪಾತ್ರೆಗಳನ್ನು ಮತ್ತೆ ತೊಳೆದು ತನ್ನ ಪತಿದೇವರಿಗಾಗಿ ಬೇರೆ ಅಡಿಗೆ ಮಾಡಲು ಸಿದ್ಧಳಾದಳು.

ರಾಮಾನುಜರು ಮನೆಗೆ ಬಂದರು. ನೋಡಿದರು, ಮೊದಲು ಮಾಡಿದ್ದ ಪಾತ್ರೆಗಳಲ್ಲಿ ಒಂದು ಅಗಳು ಅನ್ನವೂ ಸಹ ಇಲ್ಲ. ಹೆಂಡತಿ ಮಡಿಯಿಂದ ಹೊಸದಾಗಿ ಅಡಿಗೆ ಮಾಡುತ್ತಿದ್ದಾಳೆ.

**ರಾಮಾನುಜರು:** "ಕಾಂಚಿಪೂರ್ಣರು ಬಂದಿದ್ದರೇ? ಮತ್ತೊಮ್ಮೆ ಏಕೆ ಅಡಿಗೆ ಮಾಡುತ್ತಿರುವೆ? ಬೆಳಗ್ಗೆ ಮಾಡಿದ ಅಡಿಗೆ ಏನಾಯಿತು?".

**ರಕ್ಷಕಾಂಬಾಳ್:** "ಕಾಂಚಿಪೂರ್ಣರು ಬಂದು ಊಟ ಮಾಡಿಕೊಂಡು ಹೋದರು. ಅವರು ಊಟ ಮಾಡಿದ ಎಲೆಯನ್ನು ಅವರೇ ತೆಗೆದು, ಎಲೆಗೋಮ ಮಾಡಿ ಹೊರಟು ಹೋದರು. ಉಳಿದ ಆಹಾರವನ್ನು ಪಕ್ಕದ ಮನೆಯ ಶೂದ್ರಳಿಗೆ ಕೊಟ್ಟು ಸ್ನಾನ ಮಾಡಿಕೊಂಡು ತಮಗಾಗಿ ಬೇರೆ ಅಡಿಗೆ ಮಾಡುತ್ತಿದ್ದೇನೆ. ಶೂದ್ರನಿಗೆ ಹಾಕಿ ಉಳಿದ ಅನ್ನವನ್ನು ತಮಗೆ ಹೇಗೆ ಬಡಿಸುವುದು?".

**ರಾಮಾನುಜರು:** ನೀನು ಶುದ್ಧ ಮೂರ್ಖಳು ಎಂದು ಹೆಂಡತಿಯನ್ನು ಗದರಿಸಿದರು. ಮಹಾತ್ಮರಾದ ಅವರೊಂದಿಗೆ ನೀನು ಶೂದ್ರನೊಂದಿಗೆ ವರ್ತಿಸುವಂತೆ ವರ್ತಿಸಿದೆಯಾ, ನನ್ನದು ದುರದೃಷ್ಟ. ಅವರ ಪ್ರಸಾದವನ್ನು ಕಡೆಗೂ ತೆಗೆದುಕೊಳ್ಳಲಾಗಲಿಲ್ಲವೇ ಎಂದು ದುಃಖದಿಂದ ತನ್ನ ತಲೆ ಚಚ್ಚಿಕೊಂಡು ಹೊರಗಡೆಯ ಮರದ ಬಳಿಕುಳಿತು ಅಳುತ್ತಾ ಶ್ರೀ ವರದರಾಜನನ್ನು ಭಜಿಸಿದರು.

ರಾಗ-ಮೋಹನ ಅಟ್ಟತಾಳ

ಎಷ್ಟೆಂದು ವರ್ಣಿಸಲೊ ವರದ ನಿನ್ನಯ ಮಹಿಮೆ ।
ಎಷ್ಟೆಂದು ವರ್ಣಿಸ । ಲೋ ವರದ ನಿನ್ನಯ ಮಹಿಮೆ ॥ಪ॥
ಇಷ್ಟದೇವನೆಂದು ತಿಳಿದು । ಪ್ರಭುವೆ ನಿನ್ನನು ಪೂಜಿಸೆ ।
ಇಷ್ಟವೆನ್ನಯ ಸಲಿಸಲಾಗದೆ । ಭ್ರಷ್ಟನನ್ನಾಗಿಸಿದೆ ನೀನು ॥೧॥

ಯಾಮುನಾಚಾರ್ಯರ । ದರುಶನ ಕ್ಕೋಗಲು ।
ಅಮರರನ್ನಾಗಿಸಿ ಅವರ । ದೂರಮಾಡಿದೆ ಎನ್ನ ॥
ಪ್ರೇಮಿಕಾಂಚೀಪೂರ್ಣರೆಂಜಲು । ಸವಿದುಶುದ್ಧ ಪರಮನಾಗಲು ।
ಸುಮನರರಸನೀನು ಎನ್ನನು । ಮರೆಮಾಚಿದೂರ ಮಾಡಿದೆ ॥೨॥

ಈ ಕಡೆ ಕಾಂಚೀಪೂರ್ಣರು ಶ್ರೀ ವರದರಾಜನಿಗೆ ಚಾಮರ ಸೇವೆ ಮಾಡುತ್ತ ಅವನ ಅದ್ಭುತ ಲೀಲೆಯನ್ನು ಹಾಡುತ್ತಿದ್ದರು.

ರಾಗ-ಷಣ್ಮುಖಪ್ರಿಯ ಆದಿತಾಳ

ಏನೆಂದು ಪೊಗಳಲಿ । ನಿನ್ನ ಲೀಲೆಯನು ।
ಎನ್ನಯ ಮತಿಗೆ । ನಿಲುಕದು ವರದನೆ ॥ಪ॥
ನಿನ್ನಯ ಭಕ್ತರ । ಸೇವಿಪುದೊಂದೆ ।
ಎನ್ನಯಗುರಿ, ಇದ । ನೀತಿಳಿಯೋ ॥೧॥

ಅನವರತವು ನಿನ್ನ । ಸೇವಿಪದಾಸನ ।
ಹೀನಚರಣವನು । ಪಿಡಿದರಾಮಾನುಜ ॥
ಅನಂತ ಪರಿಪೂರ್ಣ । ಪರಮ ಪವಿತ್ರನು ॥ (ಇಳೆಯ ಅಂಡವನು)
ಅನುರಕ್ತನಾದನೆನ್ನ । ಎಂಜಲಭುಂಜಿಸಲು ॥೨॥

ಇದೆಲ್ಲವೂನಿನ್ನ । ಲೀಲೆಯೆಂದರಿಯುವೆ ।
ಅದುವೆಕಾರಣ । ನಿನ್ನನಾ ತೊರೆಯುವೆ ॥
ಉದಯದಿ, ಆಜ್ಞೆಯ । ನೀಡು ಎನಗೆದೇವ ।
ಮುದದಲಿ ನಾನು । ಸೇರುವೆ ತಿರುಪತಿಯ ॥೩॥

ಈ ರೀತಿ ಶ್ರೀ ವರದರಾಜನ ಅಪ್ಪಣೆ ಪಡೆದು ಕಾಂಚೀಪೂರ್ಣರು ತಿರುಪತಿಗೆ ಶ್ರೀ ಬಾಲಾಜಿಯ ದರ್ಶನಕ್ಕಾಗಿ ಹೊರಟರು. ಆರು ತಿಂಗಳು ಶ್ರೀ ವೆಂಕಟೇಶ್ವರನ ಸೇವೆಯಲ್ಲಿ ಕಳೆದರು.

ಒಂದು ದಿನ ಶ್ರೀಮನ್ನಾರಾಯಣನು ಹೇಳಿದನು. "ಕಾಂಚೀಪುರದಲ್ಲಿ ನಾನು ಅತ್ಯಂತ ತಾಪದಿಂದ ನರಳುತ್ತಿದ್ದೇನೆ. ಅಲ್ಲಿಗೆ ಹೋಗಿ ನನಗೆ ಗಾಳಿ ಹಾಕಲಾರೆಯಾ ?".

ಸ್ವಾಮಿಯ ಮಾತನ್ನು ಕೇಳುತ್ತಲೇ ಕಾಂಚೀಪೂರ್ಣರು ಕಾಂಚೀಪುರಕ್ಕೆ ಹಿಂದಿರುಗಿದರು.

ಒಂದು ದಿನ ಒಬ್ಬ ದುರ್ಬಲ ಶೂದ್ರ ಸೇವಕ ರಾಮಾನುಜರಲ್ಲಿಗೆ ಬಂದನು. ಆ ದಿನ ಅಭ್ಯಂಜನ ದಿನವಾಗಿತ್ತು. ಆ ಸೇವಕ ರಾಮಾನುಜರಿಗೆ ಎಣ್ಣೆ ಹಚ್ಚುತ್ತಿದ್ದ. ಅವನ ದುರ್ಬಲ ದೇಹವನ್ನು ನೋಡಿ ರಾಮಾನುಜರ ಮನ ಕರಗಿತು. ತಮ್ಮ ಹೆಂಡತಿಗೆ ಸೂಚಿಸಿದರು. "ನಿನ್ನೆಯ ಅನ್ನವೇನಾದರೂ ಉಳಿದಿದ್ದರೆ, ಈತನಿಗೆ ಕೊಡು, ಮೂರುನಾಲ್ಕು ದಿನಗಳಿಂದ ಈತನಿಗೆ ಊಟವಿಲ್ಲವೆಂದು ಕಾಣುತ್ತೆ".

**ರಕ್ಷಕಾಂಬಾಳ್:** "ಅನ್ನವೂ ಇಲ್ಲ, ಏನೂ ಇಲ್ಲ. ಈಗ, ಬೆಳಗಿನ ವೇಳೆ ಏನು ಕೊಡಲಿ ಎಂದು ಹೇಳಿ ಸ್ನಾನಕ್ಕೆ ಹೊರಟು ಹೋದಳು".

ರಾಮಾನುಜರು ಅಡಿಗೆ ಮನೆಗೆ ಹೋಗಿ ನೋಡಲಾಗಿ ಬೇಕಾದಷ್ಟು ಅನ್ನವಿತ್ತು. ಕೂಡಲೇ ಆ ಅನ್ನವನ್ನೆಲ್ಲಾ ತಂದು ಆ ಸೇವಕನಿಗೆ ಕೊಟ್ಟು ಹೇಳಿದರು – "ಮೊದಲು ಊಟಮಾಡು, ಆಮೇಲೆ ಎಣ್ಣೆ ಹಚ್ಚು".

ಬಹಳ ಕಾಲದ ಮೇಲೆ ಕಾಂಚೀಪೂರ್ಣರು ಮತ್ತು ರಾಮಾನುಜರು ಒಂದ ಕಡೆ ಸೇರಿದರು. ಒಬ್ಬರನ್ನೊಬ್ಬರು ನೋಡಿ ಸಂತೋಷಪಟ್ಟರು. ಕುಶಲ ಮಾತುಕತೆಗಳಾದವು. ನಂತರ ರಾಮಾನುಜರು ಶ್ರೀ ವರದರಾಜನ ದಾಸರನ್ನು ಕೇಳಿದರು.

**ರಾಮಾನುಜರು:** ಮಹಾತ್ಮರೇ, ಹಿಂದಿನಿಂದಲೂ ಕೆಲವು ಸಂದೇಹಗಳು ನನ್ನನ್ನು ಕಾಡುತ್ತಿವೆ. ತಾವು ವರದರಾಜನನ್ನು ಕೇಳಿ ನನ್ನ ಸಂದೇಹಗಳನ್ನು ಬಗೆ ಹರಿಸಿದರೆ ನನಗೆ ಶಾಂತಿ ದೊರೆಯುತ್ತದೆ. ತಮ್ಮನ್ನು ಬಿಟ್ಟು ಮತ್ತಾರಲ್ಲಿ ನನ್ನ ಅಳಲನ್ನು ಹೇಳಿಕೊಳ್ಳಲಿ".

**ಕಾಂಚೀಪೂರ್ಣರು:** "ನಾನು ಇದರ ಬಗ್ಗೆ ಸ್ವಾಮಿಯಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ".

ಮಾರನೆಯ ದಿನ ಕಾಂಚೀಪೂರ್ಣರ ಬಳಿ ರಾಮಾನುಜರು ಹೋದರು.

**ಕಾಂಚೀಪೂರ್ಣರು:** "ಮಗು, ರಾತ್ರಿ ಶ್ರೀ ವರದರಾಜನು ಈ ರೀತಿ ನಿನಗೆ ತಿಳಿಸುವಂತೆ ಅಪ್ಪಣೆ ಕೊಟ್ಟಿದ್ದಾನೆ".

1) **ಅಹಮೇವಪರಂತತ್ವಂ ಜಗತ್ಕಾರಣ ಕಾರಣಂ ।**
ನಾನೇ ಪೂರ್ಣ ಬ್ರಹ್ಮನು. ಜಗದ ಕಾರಣವಾದ ಪ್ರಕೃತಿಗೆ ಕಾರಣನು.

2) **ಕ್ಷೇತ್ರಜ್ಞೇಶ್ವರ ಯೋರ್ಭೇದಃಸಿದ್ಧಿ ಏವ ಮಹಾಮತೇ ॥**
ಜೀವ ಮತ್ತು ಈಶ್ವರ - ಇವರ ಭೇದ ಸ್ವತಃ ಸಿದ್ಧವಾದದ್ದು.

3) **ಮೋಕ್ಷೋಪಾಯೋನ್ಯಾಸ ಏವಜನಾನಾಂ ಮುಕ್ತಿಮಿಚ್ಛತಾಂ ।**
ಮುಕ್ತಿಯನ್ನು ಬಯಸುವವರಿಗೆ (ಪರಮಾತ್ಮನ ಪಾದಗಳಲ್ಲಿ) ಆತ್ಮಸಮರ್ಪಣೆಯೇ ಮೋಕ್ಷಕ್ಕೆ ಮೂಲ.

4) **ಮದ್ಭಕ್ತಾನಾಂ ಜನಾನಾಂ ಚ ನಾಂತಿಮಸ್ಮೃತಿರಿಷ್ಯತೇ ॥**
ನನ್ನ ಸದ್ಭಕ್ತರು ಮುಕ್ತಿ ಪಡೆಯಲು ಅಂತಿಮ ಸಮಯದಲ್ಲೂ ನನ್ನನ್ನು ಸ್ಮರಿಸಬೇಕಾಗಿಲ್ಲ.

5) **ದೇಹಾವ ಸಾನೇ ಭಕ್ತಾನಾಂ ದದಾಮಿ ಪರಮಂಪದಂ ।**
ನನ್ನ ಭಕ್ತರಿಗೆ ದೇಹವನ್ನು ಬಿಡುತ್ತಲೇ ಪರಮ ಪದವನ್ನು ಕೊಡುತ್ತೇನೆ.

6) **ಪೂರ್ಣಾಚಾರ್ಯಂ ಮಹಾತ್ಮಾನಂ ಸಮಾಶ್ರಯ**
**ಗುಣಾಶ್ರಯಮ್ ॥ ಇತಿ ರಾಮಾನುಜಾರ್ಯಾಯ**
**ವಯೋಕ್ತಂ ವದ ಸತ್ವರಂ ।**
ಎಲ್ಲಾ ಸದ್ಗುಣಗಳನ್ನು ಹೊಂದಿರುವ ಮಹಾತ್ಮ ಮಹಾಪೂರ್ಣರಲ್ಲಿ ಆಶ್ರಯವನ್ನು ಪಡೆಯುವಂತೆ, ನನ್ನ ಅನುಜ್ಞೆಯನ್ನು ರಾಮಾನುಜರಿಗೆ ನೀನು ಈ ಕೂಡಲೇ ಹೋಗಿ ತಿಳಿಸು.

ಈ ಆರು ಸಂದೇಹಗಳೇ ರಾಮಾನುಜರನ್ನು ಕಾಡುತ್ತಿದ್ದವು. ಶ್ರೀ ವರದರಾಜನು ತನ್ನ ವಾಗ್ಯಂತ್ರದಂತಿದ್ದ ಕಾಂಚೀಪೂರ್ಣರ ಮೂಲಕ ಅವುಗಳನ್ನು ಬಗೆ ಹರಿಸಿದನು.

ಅವರ ಸಂದೇಹಗಳು ಬಗೆಹರಿಯುತ್ತಲೇ ರಾಮಾನುಜರ ಆನಂದಕ್ಕೆ ಪಾರವೇ ಇಲ್ಲವಾಯ್ತು. ಕುಣಿದು ಕುಪ್ಪಳಿಸಿದರು. ಕೂಡಲೇ ಮಹಾತ್ಮ ಕಾಂಚೀಪೂರ್ಣರ ಪಾದಗಳಿಗೆರಗಿ, ಶ್ರೀ ವರದರಾಜನ ದೇವಸ್ಥಾನದ ಮುಂದೆ ಸಾರಿಸಾರಿ ದೀರ್ಘದಂಡ ನಮಸ್ಕಾರ ಹಾಕಿ, ಕೂಡಲೇ ಮಹಾಪೂರ್ಣರಿಂದ ದೀಕ್ಷೆ ಪಡೆಯಲು ಶ್ರೀರಂಗಕ್ಕೆ ಹೊರಟರು.

ಆಳವಂದಾರರ ನಂತರ ಶ್ರೀರಂಗ ಮಠದಲ್ಲಿ ಶಾಸ್ತ್ರಾರ್ಥಗಳ ವ್ಯಾಖ್ಯಾನ ಮಾಡುವಂತಹ ಸಮರ್ಥರಿರಲಿಲ್ಲ.

ತಿರುವರಂಗರು ಮಠದ ಮುಖ್ಯಸ್ಥರಾಗಿದ್ದರು. ಅವರೂ ದೊಡ್ಡಭಕ್ತರಾಗಿದ್ದರು. ಆದರೆ ಗುರುಗಳ ನೈಪುಣ್ಯ ಅವರಲ್ಲಿರಲಿಲ್ಲ.

ಮಠದಲ್ಲಿ ಗೃಹಸ್ಥ, ಬ್ರಹ್ಮಚಾರಿ ಎಲ್ಲರಿಗೂ ವಾಸ ಮಾಡಲು ಅವಕಾಶವಿತ್ತು. ಆದರೆ ಗೃಹಿಣಿಯರು ಮಠದ ಹೊರಗೆ ಇರಬೇಕಾಗಿತ್ತು. ಮಠದಲ್ಲಿ ಎಲ್ಲರೂ ಭಗವದಾರಾಧನೆ, ಭಜನೆ ಇವುಗಳಲ್ಲಿ ಕಾಲ ಕಳೆಯುತ್ತಿದ್ದರು.

ಯಾಮುನ ಮುನಿಗಳು ಬೃಂದಾವನಸ್ಥರಾದ ಒಂದು ವರ್ಷದ ಮೇಲೆ ಒಂದು ದಿನ ತಿರುವರಂಗರು ತನ್ನ ಸ್ನೇಹಿತರನ್ನೆಲ್ಲಾ ಸಭೆ ಸೇರಿಸಿ ಈ ರೀತಿ ಹೇಳಿದರು – "ಇಲ್ಲಿ ಪವಿತ್ರ ಗ್ರಂಥಗಳ ಬಗ್ಗೆ ವ್ಯಾಖ್ಯಾನ ಮಾಡುವವರು ಯಾರೂ ಇಲ್ಲವಾಗಿದೆ. ಈಗ ಯಾಮುನ ಮುನಿಗಳ ಸ್ಥಾನವನ್ನು ಅಲಂಕರಿಸಲು ಶ್ರೀ ರಾಮಾನುಜರೊಬ್ಬರೇ ಸಮರ್ಥರು. ಆದ್ದರಿಂದ ನಮ್ಮಲ್ಲೇ ಯಾರಾದರೊಬ್ಬರು ಅವರಲ್ಲಿಗೆ ಹೋಗಿ ಅವರಿಗೆ ಪಂಚ ಸಂಸ್ಕಾರ ಮಾಡಿ, ಇಲ್ಲಿಗೆ ಕರೆತರೋಣ. ಅವರೇ ಯಾಮುನಾಚಾರ್ಯರ ಸಿದ್ಧಾಂತಗಳನ್ನು ಇಡೀ ಭಾರತದಲ್ಲೇ ಪ್ರಚಾರ ಮಾಡಲು ಸಮರ್ಥರು. ಅವರು ಮಾಡಿದ ಶಪಥಗಳು, ತತ್ಫಲವಾಗಿ ಯಾಮುನ ಮುನಿಗಳ ಬೆರಳುಗಳು ನೆಟ್ಟಗೆ ನಿಂತದ್ದು, ಇಂದಿಗೂ ನನ್ನ ಕಣ್ಣಮುಂದೆ ಕಟ್ಟಿದಂತಿದೆ".

ಈ ಸಲಹೆಗೆ ಸಭಿಕರೆಲ್ಲರೂ ಒಪ್ಪಿದರು. ರಾಮಾನುಜರಿಗೆ ಪಂಚಸಂಸ್ಕಾರ ಮಾಡಿ, ಅವರನ್ನು ಶ್ರೀರಂಗಕ್ಕೆ ಕರೆತರಲು ಮಹಾಪೂರ್ಣರನ್ನು ಆರಿಸಿದರು. ಮಹಾಪೂರ್ಣರಲ್ಲಿ ಅರಿಕೆ ಮಾಡಿಕೊಂಡರು. ಮಹಾಪೂರ್ಣರು ಎಲ್ಲರ ಇಷ್ಟದಂತೆ ತನ್ನ ಪತ್ನಿಯೊಡಗೂಡಿ ರಾಮಾನುಜರನ್ನು ಕರೆತರಲು ಹೊರಟರು.

ಮಹಾಪೂರ್ಣರು ಮದುರಾಂತಕ ಪಟ್ಟಣ ಸೇರಿದರು. ಅಲ್ಲಿ ಒಂದು ವಿಷ್ಣು ದೇವಾಲಯ, ಅದರ ಮುಂದೆ ಒಂದು ಸರೋವರವಿತ್ತು. ಅದರ ದಂಡೆಯ ಮೇಲೆ ಇಬ್ಬರೂ ದಂಪತಿಗಳು ವಿಶ್ರಾಂತಿ ಪಡೆಯುತ್ತಿದ್ದರು.

'ದೇ ಸ್ಥಳಕ್ಕೆ ರಾಮಾನುಜರೂ ಬಂದರು. ಮಹಾಪೂರ್ಣರನ್ನು ನೋಡುತ್ತಲೇ ಅವರ ಪಾದಗಳಿಗೆರಗಿದರು. ಇಬ್ಬರಿಗೂ ಎಲ್ಲಿಲ್ಲದ ಆನಂದವುಂಟಾಯಿತು. ಮಹಾಪೂರ್ಣರು ಪ್ರೀತಿಯಿಂದ ರಾಮಾನುಜರನ್ನು ಅಪ್ಪಿಕೊಂಡರು.

**ಮಹಾಪೂರ್ಣರು:** ಮಗು, ಎಂತಹ ಆಶ್ಚರ್ಯ. ನೀನು ಇಲ್ಲಿ. ಎಲ್ಲವೂ ಶ್ರೀ ಮನ್ನಾರಾಯಣನ ಕೃಪೆ. ನೀನು ಇಲ್ಲಿಗೆ ಬಂದ ಕಾರಣ.

**ರಾಮಾನುಜರು:** ಇದು ನಾರಾಯಣನ ಅಮೋಘ ಕೃಪೆ. ತಮ್ಮ ಪಾದಗಳನ್ನರಸಿಯೇ ನಾನು ಕಾಂಚೀಪುರವನ್ನು ಬಿಟ್ಟೆ. ವರದಾರಜನೇ ತಮ್ಮನ್ನು ನನ್ನ ಗುರುವನ್ನಾಗಿ ಆರಿಸಿದನು. ತಾವು ಕೃಪೆ ಮಾಡಿ ನನಗೆ ಕೂಡಲೇ ಧಾರ್ಮಿಕ ದೀಕ್ಷೆಯನ್ನು ಕೊಟ್ಟು ಪವಿತ್ರನನ್ನಾಗಿ ಮಾಡಿ".

**ಮಹಾಪೂರ್ಣರು:** ನಾವು ಕಾಂಚೀಪುರಕ್ಕೆ ಹೋಗಿ ಶ್ರೀ ವರದರಾಜನ ಸನ್ನಿಧಿಯಲ್ಲೇ ಆ ಪವಿತ್ರ ಧಾರ್ಮಿಕ ಸಂಸ್ಕಾರವನ್ನು ನಡೆಸೋಣ.

**ರಾಮಾನುಜರು:** ಪೂಜ್ಯರೇ, ನಾನು ಒಂದು ಕ್ಷಣವೂ ನಿಧಾನಿಸಲಾರೆ,

**ಸ್ವಪಂತಂವಾಪಿ ಭುಂಜಾನಂ ಗಚ್ಛಂತಮಪಿ ವರ್ತ್ಮನಿ ।**
**ಯುವಾನಮಪಿ ಬಾಲಂ ವಾಸ್ವವಶೇ ಕುರುತೇ ವಿಧಿಃ ॥**

"ಮನುಷ್ಯ ನಿದ್ರಿಸುತ್ತಿರಲಿ, ಊಟ ಮಾಡುತ್ತಿರಲಿ, ರಸ್ತೆಯಲ್ಲಿ ಸಂಚರಿಸುತ್ತಿರಲಿ, ಅವನು ಯುವಕನೇ ಆಗಿರಲಿ, ಹುಡುಗನೇ ಆಗಿರಲಿ, ಎಲ್ಲ ಸ್ಥಿತಿಯಲ್ಲೂ ವಿಧಿ (ಸಾವು) ಅವನನ್ನು ತನ್ನ ವಶಪಡಿಸಿಕೊಳ್ಳುತ್ತದೆ. ಸಾವಿಗೆ ಕಾಲವೆಂಬುದಿಲ್ಲ. ತಮ್ಮೊಡನೆ ಹಿಂದೆ ಯಾಮುನ ಮುನಿಗಳನ್ನು ನೋಡಲು ಹೋದಾಗ ನನ್ನ ಆಸೆ ಈಡೇರಿತೇ? ಆದ್ದರಿಂದ ಈ ಕ್ಷಣದಲ್ಲೇ ತಮ್ಮ ಪಾದಗಳಡಿಯಲ್ಲಿ ಆಶ್ರಯ ನೀಡಿ ಉದ್ಧರಿಸಿ".

ಮಹಾಪೂರ್ಣರು ಈ ವೈರಾಗ್ಯಪೂರ್ಣ ಮಾತುಗಳನ್ನು ಕೇಳಿ ಬಹಳ ಸಂತೋಷ ಭರಿತರಾದರು. ಕೂಡಲೇ ಭಗವಾನ್ ವಿಷ್ಣುದೇವಾಲಯದ ಎದುರಲ್ಲಿ ಸರೋವರದ ದಂಡೆಯ ಮೇಲಿದ್ದ ಬಕುಳ ವೃಕ್ಷದಡಿಯಲ್ಲಿ ಹೋಮಕುಂಡವನ್ನು ಸಿದ್ಧಪಡಿಸಿದರು. ಹೋಮಾಗ್ನಿಯಲ್ಲಿ ಶಂಖ, ಚಕ್ರಗಳ ಲೋಹ ಮುದ್ರೆಗಳನ್ನು ಕಾಯಿಸಿದರು. ವೇದ ಮಂತ್ರೋಚ್ಚಾರದೊಂದಿಗೆ ರಾಮಾನುಜರ ಎಡ ಹಾಗೂ ಬಲ ಭುಜಗಳ ಮೇಲೆ ಒತ್ತಿದರು. ಆಳವಂದಾರರ ಪಾದಗಳನ್ನು ಧ್ಯಾನಿಸುತ್ತಾ ರಾಮಾನುಜರ ಬಲಕಿವಿಯಲ್ಲಿ ವೈಷ್ಣವ ಮಂತ್ರವನ್ನು ಉಚ್ಚರಿಸಿದರು. ಹೀಗೆ ಮಹಾಪೂರ್ಣರು ರಾಮಾನುಜರಿಗೆ ವೈಷ್ಣವ ದೀಕ್ಷೆಯನ್ನು ಕೊಟ್ಟರು.

ಅಲ್ಲಿ ವಿಷ್ಣು ದೇವರನ್ನು ಆರಾಧಿಸಿ, ರಾಮಾನುಜರು, ಅವರ ಗುರುಗಳು ಮತ್ತು ಗುರಪತ್ನಿ ಎಲ್ಲರೂ ಕಾಂಚೀಪುರದ ಕಡೆ ಪ್ರಯಾಣ ಬೆಳಸಿದರು.

ಕಾಂಚೀಪೂರ್ಣರಿಗೆ ಮಹಾಪೂರ್ಣರು ಬರುತ್ತಿರುವ ಸುದ್ದಿ ತಿಳಿದ ಕೂಡಲೆ, ಅವರೂ ಸಹ ಮಹಾಪೂರ್ಣರನ್ನು ಸಂಧಿಸಲು ಹೊರಟರು.

ರಾಮಾನುಜರ ಬೇಡಿಕೆಯಂತೆ ಮಹಾಪೂರ್ಣರು ರಾಮಾನುಜರ ಪತ್ನಿಗೂ ಸಹ ಮುದ್ರಧಾರಣೆ ಮಾಡಿ ದೀಕ್ಷೆ ಕೊಟ್ಟರು. ಹೀಗೆ ರಾಮಾನುಜ ದಂಪತಿಗಳಿಬ್ಬರೂ ದೀಕ್ಷೆ ಪಡೆದು ಮಹಾಪೂರ್ಣರ ಉಚ್ಛಿಷ್ಟವನ್ನು ಸ್ವೀಕರಿಸಿದರು.

ರಾಮಾನುಜರು ತಮ್ಮ ಮನೆಯಲ್ಲೇ ಮಹಾಪೂರ್ಣರಿಗೆ ಅರ್ಧ ಭಾಗವನ್ನು ಬಿಟ್ಟು ಕೊಟ್ಟರು. ಎಲ್ಲಾ ಸೌಕರ್ಯಗಳನ್ನು ಮಾಡಿಕೊಟ್ಟರು. ಅವರ ಬಳಿ ಇದ್ದುಕೊಂಡು ಪ್ರತಿನಿತ್ಯವೂ ತಮಿಳು ಪ್ರಬಂಧಗಳ ಅಧ್ಯಯನ ಮಾಡತೊಡಗಿದರು.

— ❋ —

# 11

# ಸನ್ಯಾಸ ಸ್ವೀಕಾರ

ಒಂದು ದಿನ ರಾಮಾನುಜರು ಹಾಗೂ ಮಹಾಪೂರ್ಣರು ಮನೆಯಲ್ಲಿಲ್ಲದ ಸಮಯದಲ್ಲಿ ಇವರಿಬ್ಬರ ಪತ್ನಿಯರೂ ನೀರು ತರಲು ಕೊಡಗಳನ್ನು ತೆಗೆದುಕೊಂಡು ಬಾವಿಗೆ ಹೋದರು.

ಇಬ್ಬರೂ ಒಟ್ಟಿಗೆ ಕೊಡಗಳನ್ನು ಹಗ್ಗಗಳಲ್ಲಿ ಕಟ್ಟಿ ಬಾವಿಯಲ್ಲಿ ಮುಳುಗಿಸಿದರು. ತುಂಬಿದ ಕೊಡಗಳನ್ನು ಮೇಲಕ್ಕೆ ಎಳೆಯುವಾಗ ಮಹಾಪೂರ್ಣರ ಹೆಂಡತಿ ಬೇಗನೆ ಎಳೆದಳು. ಆಕೆಯ ಕೊಡ ಮೇಲಿತ್ತು, ರಾಮಾನುಜರ ಪತ್ನಿಯ ಕೊಡ ಕೆಳಗಡೆ. ಹೀಗಾಗಿ ಮಹಾಪೂರ್ಣರ ಹೆಂಡತಿಯ ಕೊಡದ ನೀರು ರಾಮಾನುಜರ ಪತ್ನಿಯ ಕೊಡದ ಮೇಲೆ ತುಳುಕಿತು.

ಇದನ್ನು ಕಂಡು ರಾಮಾನುಜರ ಪತ್ನಿಯು ಮಹಾಪೂರ್ಣರ ಪತ್ನಿಯೊಂದಿಗೆ ಜಗಳವಾಡಿದಳು. "ನಿನಗೆ ಸ್ವಲ್ಪವಾದರೂ ಸದಾಚಾರಗೊತ್ತಿಲ್ಲ. ನೀನು ಗುರುಪತ್ನಿಯಾದ ಮಾತ್ರಕ್ಕೆ ನನ್ನ ಹೆಗಲಿನ ಮೇಲೆ ಕೂಡಿಸಿ ಕೊಳ್ಳಬೇಕೆ. ನಿನ್ನ ಕೊಡದ ನೀರು ನನ್ನ ಕೊಡದ ಮೇಲೆ ಸುರಿದು, ಒಂದು ಕೊಡ ನೀರು ವ್ಯರ್ಥವಾಯಿತು. ನಾನು ಎಂತಹ ಶ್ರೇಷ್ಠಮನೆತನಕ್ಕೆ ಸೇರಿದವಳೆಂಬುದು ನಿನಗೇನು ಗೊತ್ತು? ನಾನು ಈ ನೀರನ್ನು ಹೇಗೆ ಉಪಯೋಗಿಸಲಿ, ನಿನ್ನನ್ನು ಬೈದು ಏನು ಪ್ರಯೋಜನ. ಈ ನನ್ನ ಗಂಡನ ಕೈಹಿಡಿದು ನನ್ನ ಜಾತಿ-ಕುಲ ಎಲ್ಲವನ್ನು ಕಳೆದುಕೊಂಡೆ" ಎಂದು ದಿಕ್ಕರಿಸಿದಳು.

ಸೌಜನ್ಯಶೀಲಳೂ, ಶಾಂತ ಸ್ವಭಾವದಳವೂ ಆದ ಗುರುಪತ್ನಿ ಒಂದು ಮಾತನ್ನೂ ಆಡದೆ ದುಃಖದಿಂದ ಕಣ್ಣೀರಿಡುತ್ತಾ ಮನೆಗೆ ಬಂದಳು.

ಮಹಾಪೂರ್ಣರು ಮನೆಗೆ ಬಂದರು. ತಮ್ಮ ಹೆಂಡತಿ ಕಣ್ಣೀರಿಡುವುದನ್ನು ನೋಡಿ, ಕಾರಣವೇನೆಂದು ವಿಚಾರಿಸಿದರು. ಎಲ್ಲಾ ವಿಚಾರವನ್ನು ತಿಳಿದರು. "ನಾರಾಯಣನಿಗೆ ನಾವು ಇಲ್ಲಿರುವುದು ಸರಿತೋರಲಿಲ್ಲ. ಅದಕ್ಕಾಗಿ ರಕ್ಷಕಾಂಬಾಳರ ಬಾಯಿಯಿಂದ ಈ ಮಾತುಗಳನ್ನಾಡಿಸಿದ್ದಾನೆ. ವ್ಯಥೆಯನ್ನು ಬಿಡು. ಅವನು ಏನು ಮಾಡಿಸಿದರೂ ನಮ್ಮ ಒಳ್ಳೆಯದಕ್ಕೆ. ನಾವು ಈ ಕೂಡಲೇ ಈ ಸ್ಥಳವನ್ನು ಬಿಟ್ಟು ಶ್ರೀರಂಗನಾಥನ ಸೇವೆಗೆ ಹೋಗೋಣ ನಡೆ" ಎಂದು ತಿಳಿಸಿ, ರಾಮಾನುಜರಿಗೂ ಸಹ ತಿಳಿಸದೆ, ತನ್ನ ಹೆಂಡತಿ ಸಮೇತ ಶ್ರೀರಂಗಕ್ಕೆ ಹೊರಟೇ ಬಿಟ್ಟರು.

ರಾಮಾನುಜರು ಮಹಾಪೂರ್ಣರನ್ನು ತಮ್ಮ ಪರಮ ಗುರುವೆಂದು ಭಾವಿಸಿದ್ದರು. ಪಂಚ ಸಂಸ್ಕಾರ–ಯಜ್ಞ, ಅಂಕನ, ಊರ್ಧ್ವಪುಂಡ್ರ, ಮಂತ್ರ ಮತ್ತು ದಾಸ್ಯನಾಮ – ಇವುಗಳಿಂದ ಪುನೀತರಾಗಿ ತಾವೇ ಧನ್ಯರೆಂದು ಭಾವಿಸಿದ್ದರು. ಮಹಾಪೂರ್ಣರಿಂದ ಮನಶ್ಶಾಂತಿಯನ್ನು ಪಡೆದಿದ್ದರು. ತಮ್ಮ ಗುರುವನ್ನು ನಾರಾಯಣನೆಂದೇ ಭಾವಿಸಿದ್ದರು. ಇದರಲ್ಲಿ ಆಶ್ಚರ್ಯವೇನಿರಲಿಲ್ಲ. ತಮ್ಮ ಗುರುವಿನ ಪ್ರಸಾದವನ್ನು ತೆಗೆದುಕೊಳ್ಳದೇ ಊಟ ಮಾಡುತ್ತಿರಲಿಲ್ಲ. ಹಾಸಿಗೆಯಿಂದೇಳುತ್ತಲೇ ಪ್ರಥಮವಾಗಿ ತಮ್ಮ ಗುರುವಿಗೆ ನಮಸ್ಕಾರ ಮಾಡುತ್ತಿದ್ದರು. ದಿನದ ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಗುರುಗಳ ಪಾದದಡಿ ಕುಳಿತು ತಮಿಳು ಪ್ರಬಂಧಗಳ ಅಧ್ಯಯನ ಮಾಡುತ್ತಿದ್ದರು.

ಆರು ತಿಂಗಳ ಅವಧಿಯಲ್ಲಿ ಪೋಯ್ಗೈ ಅವರು ರಚಿಸಿದ 100 ಸ್ತೋತ್ರಗಳನ್ನು, ಭೂತರ 100, ಪೇಯರ 100, ಪೆರಿಯಾಳ್ವಾರರ 473, ಆಂಡಾಳಳ 143, ಕುಲಶೇಖರರ 145, ತಿರುಮಲಿಸಾಯಿಯವರ 216, ತೊಂಡರದಿಪ್ಪೊಡಿಯವರ 55, ತಿರುಪ್ಪಾಣ್‌ರವ 10, ಮಧುರಕವಿಯವರ 11, ತಿರುಮಂಗೈಯವರ 1360, ನಮ್ಮಾಳ್ವಾರರ 1296, ಹೀಗೆ ಒಟ್ಟು ನಾಲ್ಕು ಸಾವಿರ ಭಕ್ತಿಪೂರ್ಣ ನಾಲಾಯಿರ ಸ್ತೋತ್ರಗಳನ್ನು ಗುರುಗಳೊಂದಿಗೆ ಓದಿಮುಗಿಸಿದರು. ಮುಂದೆ ಇವುಗಳೇ '**ದಿವ್ಯಪ್ರಬಂಧ**'ವಾಗಿ ಪ್ರಸಿದ್ಧಿಗೆ ಬಂದಿತು.

ರಾಮಾನುಜರು ಅದೇ ಸಮಯದಲ್ಲಿ ತಿರುವಾಯ್ಮೊಳಿಯ ಅಧ್ಯನವನ್ನು ಸಹ ಮುಗಿಸಿದ್ದರು. ಆದ್ದರಿಂದ ಅವರು ತಮ್ಮ ಅಂತಿಮ ಗುರು ಕಾಣಿಕೆಯಾಗಿ ಅರ್ಪಿಸಲು ಹಣ್ಣು, ಹೂವು, ಎಲೆ ಅಡಿಕೆ, ಹೊಸವಸ್ತ್ರ ಇವೆಲ್ಲವನ್ನು ಕೊಂಡುಕೊಂಡು ಆದಿನ ಗುರುಗಳನ್ನು, ಗುರುಪತ್ನಿಯರನ್ನು ಷೋಡಶೋಪಚಾರದಿಂದ ಪೂಜಿಸಬೇಕೆಂಬ ಮಹದಾಕಾಂಕ್ಷೆಯಿಂದ ಮನೆಗೆ ಬಂದರು.

ಬಂದವರು ಗುರುಗಳನ್ನು ಮನೆಯಲ್ಲಿ, ಅಲ್ಲಿ, ಇಲ್ಲಿ, ಎಲ್ಲಿ ಹುಡುಕಿದರೂ ಅವರು ಕಾಣಿಸಲಿಲ್ಲ. ಆಗ ಅನುಮಾನದಿಂದ ತಮ್ಮ ಪತ್ನಿಯನ್ನು ಕೇಳಿದರು.

**ರಕ್ಷಕಾಂಬಾಳ್:** ಈ ದಿನ ಬೆಳಗ್ಗೆ ತಮ್ಮ ಗುರುಗಳ ಹೆಂಡತಿಯೊಂದಿಗೆ ನೀರು ತರಲು ಹೋಗಿದ್ದಾಗ್ಗೆ ನಮ್ಮಿಬ್ಬರಿಗೂ ಜಗಳವಾಯಿತು. ನಾನೇನು ಆಕೆಯನ್ನು ದಂಡಿಸಲಿಲ್ಲ. ಆದರೂ ಅವರಿಬ್ಬರು ಮನೆ ಬಿಟ್ಟು ಹೊರಟು ಹೋದರು. ಸಾಧುಗಳಿಗೆ ಕೋಪವಿರಬಾರದು. ತಮ್ಮ ಸಾಧುಗಳಿಗೆ ನನ್ನ ಶತ ನಮಸ್ಕಾರಗಳು.

**ರಾಗ-ಮೋಹನ**

ಕಂದ ॥ ದುರುಳೆ ನಿನ್ನಯ ವರ್ತನೆಯ
ಭರಿಸದಲೆ ಗುರುವರರ್ಬಿಟ್ಟರೀತಾಣವಂ ।
ಅರಿಯದೆ ಪಾಪಿಯಾದನೀ
ತೋರದಿರೆನಗೆ ನತದೃಷ್ಟಮುಕವಂ ॥

"ನೀನೇ ಚಂಡಾಲಿ, ನಿನ್ನ ಮುಖವನ್ನು ನೋಡುವುದೇ ಮಹಾಪಾಪ" ಎಂದು ಹೇಳಿ ಗುರುಗಳಿಗೆ ಅರ್ಪಿಸಲು ತಂದಿದ್ದ ಪೂಜಾ ವಸ್ತುಗಳೆಲ್ಲಾ ತೆಗೆದುಕೊಂಡು ಸ್ವಾಮಿ ವರದರಾಜನನ್ನು ಆರಾಧಿಸಲು ದೇವಸ್ಥಾನದ ಕಡೆ ಹೊರಟು ಹೋದರು.

ರಕ್ಷಕಾಂಬಾಳಳು ತನ್ನ ಪತಿಯ ನಿಂದನೆಯನ್ನು ಕೇಳಿ ಮಮ್ಮಲ ಮರುಗಿದಳು. ಅದೇ ಸಮಯಕ್ಕೆ ಸರಿಯಾಗಿ ಒಬ್ಬ ಬಡಬ್ರಾಹ್ಮಣ, ಬಾಗಿಲಿಗೆ ಬಂದು ಆ ಗೃಹಿಣಿಯನ್ನು ಅನ್ನ ನೀಡಿರೆಂದು ಬೇಡಿದನು.

ಪತಿಯ ಕ್ರೂರ ಮಾತುಗಳನ್ನು ಕೇಳಿ ಗೋಳಿಡುತ್ತಿದ್ದ ರಕ್ಷಕಾಂಬಾಳಳು ಕಿರುಚುತ್ತಾ ಹೇಳಿದಳು – "ಹೊರಟು ಹೋಗು ಇಲ್ಲಿಂದ ನಿನಗೆ ಅನ್ನ ಹಾಕಲು ಇಲ್ಲಿ ಯಾರೂ ಇಲ್ಲ".

ಗೃಹಿಣಿಯು ಕೋಪದಿಂದಾಡಿದ ಮಾತುಗಳನ್ನು ಕೇಳಲಾರದೆ ವ್ಯಥೆಯಿಂದ ಆ ಬ್ರಾಹ್ಮಣ ಶ್ರೀ ವರದರಾಜನ ದೇವಸ್ಥಾನದ ಕಡೆ ಹೋದನು.

ರಾಮಾನುಜರು ದೇವಸ್ಥಾನದಿಂದ ಹಿಂದಿರುಗುವಾಗ ಈ ಬ್ರಾಹ್ಮಣನನ್ನು ಕಂಡರು. ಆತನ ಕೃಶದೇಹವನ್ನು ನೋಡಿ

**ರಾಮಾನುಜರು:** ಎಲೈ ಬ್ರಾಹ್ಮಣರೇ, ಈ ದಿನ ನಿಮಗೆ ಎಲ್ಲಿಯೂ ಊಟ ದೊರೆಯಲಿಲ್ಲವೇ?

**ಬ್ರಾಹ್ಮಣ:** ತಮ್ಮ ಮನೆಗೆ ಹೋಗಿದ್ದೆ. ಊಟ ಕೇಳಿದೆ ತಮ್ಮ ಪತ್ನಿಯವರು ಇಲ್ಲವೆಂದರು. ಈ ದಿನ ಊಟ ಎಲ್ಲೂ ದೊರೆಯಲಿಲ್ಲ.

**ರಾಮಾನುಜರು:** ಸ್ವಾಮಿ, ಊಟವಿಲ್ಲದೆ ಹೋಗಬೇಡಿ. ನನ್ನ ಜೊತೆಯಲ್ಲಿ ಬನ್ನಿ". ಅವರನ್ನು ಒಂದು ಅಂಗಡಿಗೆ ಕರೆದುಕೊಂಡು ಹೋದರು. ಅಲ್ಲಿ ಅತನಿಗೆ ಹಣ್ಣು, ಅರಿಸಿನ, ಕುಂಕುಮ, ಎಲೆ, ಅಡಿಕೆ, ಹೊಸವಸ್ತ್ರ ಇವುಗಳನ್ನು ಕೊಂಡುಕೊಟ್ಟರು. ಜೊತೆಗೆ ಒಂದು ಕಾಗದವನ್ನು ಬರೆದರು. ಕಾಗದದಲ್ಲಿ ಈ ರೀತಿ ಬರೆದರು.

"ನನ್ನ ಪ್ರೀತಿಯ ಮಗನೆ,

ನನ್ನ ಎರಡನೇ ಮಗಳ ಮದುವೆ ಸಮೀಪಿಸುತ್ತಿದೆ. ಆದ್ದರಿಂದ ಚಿ|| ಸೌ|| ರಕ್ಷಕಾಂಬಾಳಳನ್ನು ಈ ಪತ್ರ ತಂದಿರುವ ಬ್ರಾಹ್ಮಣನ ಜೊತೆಯಲ್ಲಿ ಕಳುಹಿಸಿಕೊಡು. ಅಲ್ಲಿ ನಿನಗೆ ಹೆಚ್ಚಿನ ಕೆಲಸದ ಒತ್ತಡವಿಲ್ಲದಿದ್ದಲ್ಲಿ ನೀನೂ ಸಹ ಇಲ್ಲಿಗೆ ಬಂದರೆ ಒಳ್ಳೆಯದು. ನೀನು ರಕ್ಷಕಾಂಬಳನ್ನು ಕಳುಹಿಸಿಕೊಡದಿದ್ದಲ್ಲಿ ನಿಮ್ಮ ಅತ್ತೆಯವರೇ ಎಲ್ಲಾ ಕೆಲಸ ಕಾರ್ಯಗಳನ್ನು ಮಾಡಿಕೊಂಡು, ಬಂದು ಹೋಗುವ ನೆಂಟರಿಷ್ಟರನ್ನು ಉಪಚರಿಸುವುದು ಕಷ್ಟವಾಗುತ್ತೆ.

ಇಂತು ಆಶೀರ್ವಾದಗಳು,

"ಈ ಕಾಗದವನ್ನು ಈ ಎಲ್ಲಾ ವಸ್ತುಗಳನ್ನು ತೆಗೆದುಕೊಂಡು ನಮ್ಮ ಮನೆಗೆ ಹೋಗಿ, ನನ್ನ ಪತ್ನಿಗೆ ಕೊಡಿ. ನಿಮ್ಮ ತಂದೆಯವರು ನನ್ನನ್ನು ಕಳುಹಿಸಿಕೊಟ್ಟರು ಎಂದು ತಿಳಿಸಿ. ನಿಮಗೆ ಒಳ್ಳೆಯ ಅತಿಥ್ಯ ನಡೆಯುತ್ತೆ" ಎಂದು ಹೇಳಿ ಆ ಬ್ರಾಹ್ಮಣರನ್ನು ಕಳುಹಿಸಿದರು.

ಆ ಬ್ರಾಹ್ಮಣರು ರಾಮಾನುಜರ ಮಾತಿನಂತೆ ಅವರ ಮನೆಗೆ ಪುನಃ ಹೋಗಿ, ಅವರ ಪತ್ನಿಗೆ ಎಲ್ಲ ವಸ್ತುಗಳನ್ನು ಹಾಗೂ ಆ ಪತ್ರವನ್ನೂ ಕೊಟ್ಟರು.

ಆಗ ರಕ್ಷಕಾಂಬಾಳಳಿಗೆ ಎಲ್ಲಿಲ್ಲದ ಸಂತೋಷವಾಯಿತು. ಸ್ನಾನಕ್ಕೆ ನೀರು ಅಣಿ ಮಾಡಿದಳು.

ಆ ವೇಳೆಗೆ ರಾಮಾನುಜರು ಮನೆಗೆ ಬಂದರು.

**ರಕ್ಷಕಾಂಬಾಳ್:** ನನ್ನ ತಂದೆಯವರು ಈ ಪತ್ರವನ್ನು ಕಳುಹಿಸಿದ್ದಾರೆ; ಎಂದು ಹೇಳಿ ಬಹಳ ಸಂತೋಷದಿಂದ ಅದನ್ನು ರಾಮಾನುಜರಿಗೆ ಕೊಟ್ಟಳು.

**ರಾಮಾನುಜರು:** (ಕಾಗದವನ್ನು ಓದಿದ ನಂತರ) ನನಗೆ ಇಲ್ಲಿ ಅಗತ್ಯವಾದ ಒಂದು ಕೆಲಸ ಬಿದ್ದಿದೆ. ಅದನ್ನು ಬಿಟ್ಟು ಬರಲು ಸಾಧ್ಯವಿಲ್ಲ. ಅದನ್ನು ಮುಗಿಸಿಕೊಂಡು ಬರುವ ಪ್ರಯತ್ನ ಮಾಡುತ್ತೇನೆ. ಆದರೆ ನೀನು ಈ ಬ್ರಾಹ್ಮಣರ ಜೊತೆಗೂಡಿ ತವರಿಗೆ ಹೋಗು. ಅತ್ತೆ ಮಾವನವರಿಗೆ ನನ್ನ ನಮಸ್ಕಾರಗಳನ್ನು ತಿಳಿಸು"

ಎಲ್ಲರ ಊಟವಾದ ನಂತರ ರಕ್ಷಕಾಂಬಾಳಳು ಸಂತೋಷದಿಂದ ತನ್ನ ಪತಿದೇವರಿಗೆ ನಮಸ್ಕರಿಸಿ ಬ್ರಾಹ್ಮಣರ ಜೊತೆ ತಂದೆಯ ಮನೆಗೆ ಹೊರಟಳು.

ರಾಮಾನುಜರೂ ಸಹ ಮನೆಯನ್ನು ಬಿಟ್ಟು ವರದರಾಜನ ದೇವಸ್ಥಾನದ ಕಡೆ ಹೊರಟರು.

ದೇವಾಲಯದಲ್ಲಿ ಶ್ರೀ ವರದರಾಜನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಪ್ರಾರ್ಥಿಸಿಕೊಂಡರು "ಹೇ, ದೇವಾ, ಇಂದಿನಿಂದ ಎಲ್ಲ ರೀತಿಯಲ್ಲಿಯೂ ನಾನು ನಿನ್ನವನು. ನನ್ನನ್ನು ಕೃಪೆ ಮಾಡಿ ಸ್ವೀಕರಿಸು". ಹೀಗೆಂದು ಕೇಳಿಕೊಂಡು, ತಾವು ತಂದಿದ್ದ ಕಾಷಾಯ ವಸ್ತ್ರವನ್ನು, ದಂಡವನ್ನೂ ಸ್ವಾಮಿಯ ಪಾದಗಳಿಗೆ ಮುಟ್ಟಿಸಿ ತೆಗೆದುಕೊಂಡು ದೇವಾಲಯದ ಮುಂದಿದ್ದ ಸರೋವರದ ಬಳಿ ಹೋದರು. ಹೋಮಾಗ್ನಿಯನ್ನು ಹೊತ್ತಿಸಿದರು, ತಮ್ಮ ಹೆಂಡತಿ, ಸಂಪತ್ತು, ಈ ಆಶೆಗಳನ್ನು ಆಹುತಿಯಾಗಿ ಅಗ್ನಿಗೆ ಅರ್ಪಿಸಿದರು. ಅದೇ ಸಮಯಕ್ಕೆ ಕಾಂಚೀಪೂರ್ಣರು ವರದಾರಾಜನ ಆಜ್ಞೆಯಂತೆ ಆ ಸ್ಥಳಕ್ಕೆ ಬಂದರು. ರಾಮಾನುಜರಿಗೆ '**ಯತಿರಾಜ**'ನೆಂದು ನಾಮಕರಣ ಮಾಡಿದರು. ನಂತರ ಯತಿರಾಜರು ಕಾವಿಯನ್ನು ಧರಿಸಿದರು. ಸನ್ಯಾಸಿಯ ಸೂಚಕವಾದ ತ್ರಿದಂಡವನ್ನು ಹಿಡಿದರು. ಈ ತ್ರಿದಂಡ ತನು, ವಾಙ್ಮನಗಳನ್ನು ತನ್ನ ಹತೋಟಿಯಲ್ಲಿಡು ಎಂಬುದನ್ನು ಸೂಚಿಸುತ್ತದೆ.

ಆಗ ಯತಿರಾಜರು ಈ ಪವಿತ್ರ ಉಡುಪಿನಲ್ಲಿ ಆಗತಾನೆ ಉದಯಿಸಿದ ರವಿಯಂತೆ ಪ್ರಕಾಶಿಸಿದರು.



# 12

# ಯಾದವರು ಶಿಷ್ಯರಾದರು

ನಮ್ಮಂತಹ ಅಜ್ಞಾನಿಗಳು, ಕಲವರು ರಾಮಾನುಜರು ತಮ್ಮ ಪತ್ನಿಯನ್ನು ಮೋಸದಿಂದ ತೊರೆದರೆಂದರು.

ಆದರೆ ಸಿದ್ಧಾಂತ ಏನು ಹೇಳುತ್ತೆ.

**ಆಪದರ್ಥಂ ಧನಂ ರಕ್ಷೇತ್ ದಾರಾನ್ ರಕ್ಷೇದ್ಧನೈರಪಿ ।**
**ಆತ್ಮಾನಂ ಸತತಂ ರಕ್ಷೇತ್ ದಾರೈರಪಿ ಧನೈರಪಿ ॥**

"ಕಷ್ಟ ಪರಿಹಾರಕ್ಕಾಗಿ ಹಣವನ್ನು ರಕ್ಷಿಸಬೇಕು. ಪತ್ನಿಯ ರಕ್ಷಣೆಗಾಗಿ ಎಲ್ಲ ಧನವನ್ನು ಉಪಯೋಗಿಸಬೇಕು. ಆದರೆ ಆತ್ಮರಕ್ಷಣೆಗಾಗಿ ಧನ, ಪತ್ನಿ, ಎಲ್ಲವನ್ನು ತೊರೆಯಬೇಕು".

**ಶ್ರೀ ಚೈತನ್ಯರು** ತಮ್ಮ ಗೃಹವನ್ನು ತ್ಯಜಿಸಿ, ವಿರಕ್ತರಾದಾಗ ವಿಷಯವನ್ನು ತಮ್ಮ ತಾಯಿ ಶಚೀದೇವಿಯವರಿಗೆ ಮಾತ್ರ ತಿಳಿಸಿದ್ದರು. ತಮ್ಮ ಹೆಂಡತಿ ವಿಷ್ಣುಪ್ರಿಯಳಿಗೆ ತಿಳಿಸಿರಲಿಲ್ಲ.

**ಮಹಾತ್ಮ ಶಾಕ್ಯಸಿಂಹರು** ಮನೆಯಲ್ಲಿ ಯಾರಿಗೂ ತಿಳಿಸಿದಂತೆ ಕಳ್ಳತನದಿಂದ ಮನೆಯನ್ನು ಬಿಟ್ಟು ಹೋದರು.

ಅವರಂತೆಯೇ ರಾಮಾನುಜರೂ ದಿವ್ಯಾತ್ಮರು. ಎಲ್ಲರ ಒಳ್ಳೆಯದಕ್ಕಾಗಿಯೇ ಜನ್ಮ ತಳೆದವರು. ಅವರು ಎಲ್ಲರ ಸ್ವತ್ತು.

ಅಲ್ಲದೆ ರಕ್ಷಕಾಂಬಾಳೂ ತನ್ನ ಪತಿಯ ಆಜ್ಞೆಯನ್ನು ಮೂರು ಬಾರಿ ನಿರಾಕರಿಸಿದ್ದಳು. ರಾಮಾನುಜರು ತಮ್ಮ ಪತ್ನಿಯ ಹೃದಯದಲ್ಲಿ ಭಕ್ತಿಯ ಬೀಜವನ್ನು ಬಿತ್ತಿದ್ದರೂ, ಅದು ಫಲಕಾರಿಯಾಗಿರಲಿಲ್ಲ. ಹೀಗಾಗಿ ಅವರು ಪತ್ನಿಯನ್ನು ತೊರೆದರು.

ರಾಮಾನುಜರು ಸಂಪ್ರದಾಯದಂತೆ ಯಾವ ಗುರುವಿನಿಂದಲೂ ಸನ್ಯಾಸ ದೀಕ್ಷೆ ಪಡೆಯಲಿಲ್ಲ. ಶ್ರೀ ವರದರಾಜನೇ ಅವರ ಪರಮಗುರುವಾಗಿದ್ದನು. ದೇವರಲ್ಲಿರುವ ಪರಮಭಕ್ತಿ ಮತ್ತು ಏಕಾಗ್ರತೆ, ಇವುಗಳೇ ರಾಮಾನುಜರನ್ನು ಭಕ್ತಿಮಾರ್ಗದ ಸನ್ಯಾಸಿಯನ್ನಾಗಿಸಿದವು.

ರಾಮಾನುಜರು ಸನ್ಯಾಸಿಯಾದರೆಂಬ ಸುದ್ದಿ ಎಲ್ಲೆಲ್ಲೂ ಹರಡಿತು. ಎಲ್ಲರೂ ಆಶ್ಚರ್ಯಭರಿತರಾಗಿ ಅವರ ದರ್ಶನಕ್ಕೆ ಓಡೋಡಿ ಬಂದರು.

ಅಲ್ಲಿಯ ಮಠದವರು ರಾಮಾನುಜರನ್ನು ತಮ್ಮ ಮಠದ ಅಧ್ಯಕ್ಷರನ್ನಾಗಿ ಮಾಡಿಕೊಂಡರು. ಒಬ್ಬಿಬ್ಬರು ಅವರ ಶಿಷ್ಯರೂ ಸಹ ಆದರು. ಅವರ ಚಿಕ್ಕಮ್ಮನಮಗ ದಾಶರಥಿ ಅವರಿಂದ ಮೊದಲು ದೀಕ್ಷೆಯನ್ನು ಪಡೆದನು. ವೇದವೇದಾಂತಗಳ ಅಧ್ಯಯನ ಮಾಡಿದೊಡ್ಡ ವಿಷ್ಣು ಭಕ್ತನಾದನು.

ಕೂರನಾಥ ಅಥವಾ ಕೂರೇಶನೆಂಬುವನು ಎರಡನೇ ಶಿಷ್ಯನಾದನು. ಈತನಿಗೆ ಅದ್ವಿತೀಯ ಸ್ಮರಣೆ ಶಕ್ತಿಯಿತ್ತು. ಒಮ್ಮೆ ಓದಿದರೆ ಸಾಕು, ಎಲ್ಲವನ್ನೂ ಸ್ಮರಣೆಯಲ್ಲಿಟ್ಟು ಕೊಳ್ಳುತ್ತಿದ್ದನು.

ರಾಮಾನುಜರು ನಿತ್ಯವೂ ಊರ್ಧ್ವಪುಂಡ್ರ ಧರಿಸಿ, ಪೀಠದ ಮೇಲೆ ಕುಳಿತು, ತನ್ನ ಈ ಇಬ್ಬರು ಶಿಷ್ಯರೊಂದಿಗೆ ವೇದೋಪನಿಷತ್ತುಗಳನ್ನು ಚರ್ಚಿಸುವುದನ್ನು ನೋಡುವುದೇ ತಮ್ಮ ಭಾಗ್ಯವೆಂದು ಜನರು ತಿಳಿದಿದ್ದರು.

ಒಂದು ದಿನ ಯಾದವ ಪ್ರಕಾಶರ ವೃದ್ಧತಾಯಿ ಶ್ರೀ ವರದರಾಜನ ದರ್ಶನಕ್ಕಾಗಿ ಬಂದರು. ಅಲ್ಲಿಯ ಮಠದಲ್ಲಿ ರಾಮಾನುಜರನ್ನು ನೋಡಿದರು. ಅವರ ದಿವ್ಯ ಹಾಗೂ ವಿದ್ವತ್ಪೂರ್ಣಕಾಂತಿ, ನಯ, ವಿನಯ, ಸೌಜನ್ಯ ಇವುಗಳನ್ನು ನೋಡಿ ಅವರನ್ನು ಈ ವೃದ್ಧಮಾತೆ ವರದರಾಜನೇ ಈ ದಿವ್ಯ ರೂಪಿಯಾಗಿದ್ದಾನೆಂದು ಭಾವಿಸಿದರು. ಕೂಡಲೇ ಮನೆಗೆ ಹೋಗಿ, ತನ್ನ ಮಗ ಯಾದವನನ್ನು ಈ ಮಹಾನುಭಾವರ ಶಿಷ್ಯನನ್ನಾಗಿ ಮಾಡಿಸಿ, ಅವನ ಮನದ ಅಶಾಂತಿಯನ್ನು ಹೋಗಲಾಡಿಸಬೇಕೆಂಬ ಹಂಬಲ ಮೂಡಿತು.

ಯಾದವ ಪ್ರಕಾಶರು ಹಿಂದೆ ರಾಮಾನುಜರ ಕೊಲೆ ಮಾಡಬೇಕೆಂಬ ಅಮಾನುಷಿಕ ಆಲೋಚನೆ ಮನಸ್ಸಿನಲ್ಲಿ ಹುಟ್ಟಿದಾಗಿನಿಂದಲೂ ನೆಮ್ಮದಿ, ಶಾಂತಿಯಿಲ್ಲದೆ ಪರಿತಪಿಸುತ್ತಿದ್ದರು. ಇದು ಅವರ ಈ ವೃದ್ಧತಾಯಿಗೂ ಸಹ ತಿಳಿದಿತ್ತು.

ಮಠದಿಂದ ಮನೆಗೆ ಹಿಂದಿರುಗುತ್ತಲೇ ಆ ವೃದ್ಧಮಾತೆ ತನ್ನ ಮಗನಿಗೆ ಉಪದೇಶ ಮಾಡಿದಳು – "ನೀನು ಈ ಕೂಡಲೇ ಮಠಕ್ಕೆ ಹೋಗಿ ಶ್ರೀ ರಾಮಾನುಜರ ಶಿಷ್ಯನಾಗು. ಇದರಿಂದ ನಿನ್ನ ಎಷ್ಟೋ ವರ್ಷಗಳ ಮನದ ಅಶಾಂತಿ ಖಂಡಿತ ದೂರವಾಗುತ್ತೆ" ಎಂದಳು.

ಯಾದವ ಪ್ರಕಾಶರು ತಮ್ಮ ಶಿಷ್ಯರೇ ಆಗಿದ್ದ ರಾಮಾನುಜರ ಶಿಷ್ಯರಾಗುವುದನ್ನು ಕನಸಿನಲ್ಲಿಯೂ ಕಂಡಿರಲಿಲ್ಲ.

**ಯಾದವಪ್ರಕಾಶರು:** ನಾನು ಆತನ ಶಿಷ್ಯನಾಗುವುದೇ, ಇದರಿಂದ ಶಾಂತಿ ದೊರಕುವುದೇ ಎಂಬ ಗುಂಗಿನಲ್ಲೇ ಅಲ್ಲಿ ಇಲ್ಲಿ ಸುತ್ತಾಡುತ್ತಿದ್ದರು. ಅನಿರೀಕ್ಷಿತವಾಗಿ ಕಾಂಚೀಪೂರ್ಣರ ಭೇಟಿ ಆಯಿತು.

ಕಾಂಚೀಪೂರ್ಣರು ಶ್ರೀ ವರದರಾಜನ ಧ್ವನಿವಾಹಕರೆಂದು ಎಲ್ಲರೂ ತಿಳಿದಿದ್ದರು.

**ಯಾದವ ಪ್ರಕಾಶರು:** ಸ್ವಾಮಿ, ನನ್ನ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲ. ನಾನು ಕಳೆದು ಹೋಗಿರುವ ಶಾಂತಿಯನ್ನು ಮರಳಿ ಪಡೆಯಲು ಏನು ಮಾಡಬೇಕೆಂಬುದನ್ನು ವರದರಾಜನ ಧ್ವನಿ–ವಾಹಕರಾದ ತಾವು ದಯವಿಟ್ಟು ತಿಳಿಸಿ".

**ಕಾಂಚೀಪೂರ್ಣರು:** ನೀವು ಈ ದಿನ ಮನೆಗೆ ಹೋಗಿ. ವರದರಾಜನಿಂದ ಸತ್ಯವನ್ನು ತಿಳಿದು, ನಾಳೆಯ ದಿನ ತಿಳಿಸುತ್ತೇನೆ".

ಮಾರನೆಯ ದಿನ ಕಾಂಚೀಪೂರ್ಣರು ಯಾದವ ಪ್ರಕಾಶರಿಗೆ ತಿಳಿಸಿದರು "ರಾಮಾನುಜರು ಅಸಾಧಾರಣ ಪ್ರತಿಭಾವಂತರು. ಅವರ ಶಿಷ್ಯರಾದರೆ ನೀವು ಅನೇಕ ಪ್ರಯೋಜನಗಳನ್ನು ಪಡೆಯುತ್ತೀರಿ."

ಹಿಂದಿನ ರಾತ್ರಿ ಕನಸಿನಲ್ಲಿಯೂ ಒಬ್ಬ ದೈವಪುರುಷ ಯಾದವರಿಗೆ ಕಾಣಿಸಿಕೊಂಡು ನೀವು ರಾಮಾನುಜರ ಶಿಷ್ಯರಾಗಿರೆಂದು ಹೇಳಿದ್ದನು. ಆದರೆ ಯಾದವರು ಯಾರ ಮಾತನ್ನು ಸುಲಭವಾಗಿ ಒಪ್ಪಲಿಲ್ಲ; ಸುಮ್ಮನಿರಲೂ ಆಗಲಿಲ್ಲ. ಉಪಹಾರದ ನಂತರ ಅವರು ರಾಮಾನುಜರನ್ನು ನೋಡಲು ಮಠದತ್ತ ತೆರಳಿದರು.

ಮಠದಲ್ಲಿ ರಾಮಾನುಜರು ಯಾದವ ಪ್ರಕಾಶರನ್ನು ನೋಡುತ್ತಲೇ ಬಹಳ ಭಕ್ತಿ, ಪ್ರೇಮದಿಂದ ಅವರನ್ನು ಬರಮಾಡಿಕೊಂಡು ಕೂಡಲು ಆಸನವನ್ನು ಕೊಟ್ಟರು. ರಾಮಾನುಜರ ಈ ಸೌಜನ್ಯವನ್ನು ಕಂಡು ಯಾದವರಿಗೆ ಸಂತೋಷ ಉಂಟಾಯಿತು.

ಒಬ್ಬೊರಿಗೊಬ್ಬರು ಕುಶಲವನ್ನು ವಿಚಾರಿಸಿದ ನಂತರ, ಯಾದವರು ಪ್ರಶ್ನಿಸಿದರು.

**ಯಾದವ ಪ್ರಕಾಶರು:** "ಮಗು, ನಿನ್ನ ವಿದ್ವತ್ತು ಹಾಗೂ ನಯ ವಿನಯಗಳಿಗೆ ಮಾರು ಹೋಗಿದ್ದೇನೆ. ನೀನು ಹಣೆಯ ಮೇಲೆ ಊರ್ಧ್ವಪುಂಡ್ರವನ್ನು ಧರಿಸಿರುವೆ, ಭುಜಗಳ ಮೇಲೆ ಶಂಖ ಹಾಗೂ ಚಕ್ರಗಳ ಮುದ್ರೆಗಳನ್ನು ಧರಿಸಿರುವೆ, ಇದರಿಂದ ನೀನು ಸಗುಣಬ್ರಹ್ಮನ ಆರಾಧಕನೆಂಬುದು ಸ್ಪಷ್ಟವಾಗಿದೆ. ಆದರೆ ಇದಕ್ಕೆ ಏನಾದರೂ ಶಾಸ್ತ್ರಗಳ ಆಧಾರಗಳನ್ನು ಕೊಡಬಲ್ಲೆಯಾ?"

**ರಾಮಾನುಜರು:** ಪೂಜ್ಯರೇ, ಈ ಕೂರನಾಥ ಬಹಳ ಚತುರ. ಎಲ್ಲಾ ಶಾಸ್ತ್ರಗಳನ್ನೂ ಬಾಯಿಪಾಠ ಮಾಡಿದ್ದಾನೆ. ದಯವಿಟ್ಟು ಈತನನ್ನು ಕೇಳಿ, ತಮಗೆ ಸುಲಭವಾಗಿ ಶಾಸ್ತ್ರಗಳ ಆಧಾರವನ್ನು ತಿಳಿಸುತ್ತಾನೆ.

ಯಾದವರು ಕೂರೇಶನ ಕಡೆ ನೋಡಿದರು.

**ಕೂರೇಶ:** ಪೂಜ್ಯರೇ, ಶ್ರುತಿಯ ಕೆಲವು ಶ್ರೇಷ್ಠ ಪ್ರಮಾಣಗಳನ್ನು ತಮ್ಮ ಮುಂದಿಡುತ್ತೇನೆ.

**ಪ್ರತೇವಿಷ್ಣೋರಬ್ಜ ಚಕ್ರೇಪವಿತ್ರೇ ಜನ್ಮಾಂಬೋಧಿಂ**
**ತರ್ತವೇಚರ್ಷಣೀಂದ್ರಾಃ । ಮೂಲೇ ಬಾಹ್ವೋರ್ದ**
**ಧತೇಽನ್ಯೇ ಪುರಾಣಲಿಂಗಾನ್ಯಂಗೇ ತಾವಕಾನ್ಯರ್ಪಯಂತಿ ॥**

"ಮನುಷ್ಯರಲ್ಲಿ ಶ್ರೇಷ್ಠರಾದವರು ಈ ಸಂಸಾರ ಸಾಗರವನ್ನು ದಾಟಲು ತಮ್ಮ ಭುಜಗಳ ಮೇಲೆ ವಿಷ್ಣುವಿನ ಶಂಖ ಹಾಗೂ ಚಕ್ರಗಳ ಮುದ್ರೆಗಳನ್ನು ದರಿಸುತ್ತಾರೆ. ಕೆಲವರು ಈ ಪುರಾತನ ಚಿನ್ಹೆಗಳನ್ನು ತಮ್ಮ ದೇಹದ ಮೇಲೆ ಧರಿಸುತ್ತಾರೆ.

ಪವಿತ್ರಮಿತ್ಯಗ್ನಿಃ । ಅಗ್ನಿರ್ವೈಸಹಸ್ರಾರಃ ।
ಸಹಸ್ರಾರೋನೇಮಿಃ । ನೇಮಿನಾ ತಪ್ತತನುರ್ಬ್ರಹ್ಮಣಃ
ಸಾಯುಜ್ಯಂ ಸಲೋಕತಾಮಾಪ್ನೋತಿ ।
(ವೇದಾಂತ ದೇಶಿಕರ ಸಚ್ಚರಿತ್ರ-ರಕ್ಷಾ)

ಅಗ್ನಿಯು ಪವಿತ್ರ. ಸಹಸ್ರ ಅಲಗುಗಳುಳ್ಳವನು. ಸಾವಿರ ಅಲಗುಗಳುಳ್ಳ ಚಕ್ರದ ಪಟ್ಟೆ. ಈ ಚಕ್ರದ ಮುದ್ರೆಯನ್ನು ಕಾಯಿಸಿ ಯಾರು ತನ್ನ ಶರೀರದ ಮೇಲೆ ಧರಿಸುತ್ತಾರೋ ಅವರ ಆತ್ಮ ಅಂತಿಮವಾಗಿ ಪರಮಾತ್ಮನ ಸಾಯುಜ್ಯವನ್ನು ಸೇರಿ, ಆ ಬ್ರಹ್ಮಲೋಕದಲ್ಲಿ ಅವರು ವಾಸಿಸುತ್ತಾರೆ.

**ಏಭಿರ್ವಯಮುರು ಕ್ರಮಸ್ಯ ಚಿನ್ಹೈರಂಕಿತಾ ಲೋಕೇ**
**ಸುಭಗಾಭವಾಮಃ । ತದ್ವಿಷ್ಣೋಃ ಪರಮಂ ಪದಂ**
**ಯೇಽಧಿಗಚ್ಛಂತಿ ಲಾಂಛಿತಾಃ ।**

ಚಕ್ರಾಂಕಿತರೆಲ್ಲರೂ ಹೇಗೆ ವಿಷ್ಣು ಲೋಕವನ್ನು ಪಡೆದು ಭಾಗ್ಯವಂತರಾಗುತ್ತಾರೆಯೋ ಹಾಗೆಯೇ ನಾವೂ ಸಹ ವಿಷ್ಣುವಿನ ಚಿನ್ಹೆಗಳನ್ನು ಹೊಂದಿ ಇಹದಲ್ಲೂ, ಪರದಲ್ಲೂ ಭಾಗ್ಯವನ್ನು ಗಳಿಸೋಣ.

**ಉಪವೀತಾದಿವದ್ಧಾರ್ಯಾಃ ಶಂಖಚಕ್ರಾದಯಸ್ತಥಾ ।**
**ಬ್ರಾಹ್ಮಣಸ್ಯ ವಿಶೇಷೇಣ ವೈಷ್ಣವಸ್ಯ ವಿಶೇಷತಃ ॥**

ಬ್ರಾಹ್ಮಣರು, ಅದರಲ್ಲೂ ಮುಖ್ಯವಾಗಿ ವೈಷ್ಣವರು ಯಜ್ಞೋಪವೀತವನ್ನು ಹಾಕಿಕೊಳ್ಳುವಂತೆ ಶಂಖ, ಚಕ್ರಗಳ ಮುದ್ರೆಗಳನ್ನು ಹಾಕಿಸಿ ಕೊಳ್ಳಲೇಬೇಕು.

**ಹರೇಃ ಪದಾಕೃತಿಂ ಆತ್ಮನೋಹಿಂತಾಯ ಮಧ್ಯೇ**
**ಚ್ಛಿದ್ರಮೂರ್ಧ್ವಪುಂಡ್ರಂ । ಯೋಧಾರಯತಿ ಸ**
**ಪರಸ್ಯ ಪ್ರಿಯೋ ಭವತಿ ಸಪುಣ್ಯವಾನ್ ಭವತಿ,**
**ಸ ಮುಕ್ತಿಮಾನ್ ಭವತಿ । (ಸಚ್ಚರಿತ್ರ-ರಕ್ಷಾ)**

ಯಾರು ತಮ್ಮ ಒಳಿತಿಗಾಗಿ ಊರ್ಧ್ವಪುಂಡ್ರ (ಹರಿಯ ಎರಡು ಪಾದಗಳ ಆಕೃತಿ, ಮದ್ಯೆ ಛಿದ್ರ ಅತವಾ ಅವಕಾಶವಿರುವ)ವನ್ನು ಧರಿಸುತ್ತಾರೆಯೋ ಅವರು ಪರಮಾತ್ಮನಿಗೆ ಪ್ರಿಯರೂ, ಪುಣ್ಯವಂತರೂ, ಮುಕ್ತಿವಂತರೂ ಆಗುತ್ತಾರೆ.

**ಕೂರೇಶ:** ಪೂಜ್ಯರೇ, ಬ್ರಹ್ಮನು ಸಗುಣನೆಂಬುದಕ್ಕೆ ಇನ್ನು ಕೆಲವು ಸೂತ್ರಗಳನ್ನು ತಮ್ಮ ಮುಂದೆ ಮಂಡಿಸಲು ಬಯಸುತ್ತೇನೆ.

**ಯಃ ಸರ್ವಜ್ಞ ಸರ್ವವಿತ್ । (ಮುಂಡಕೋಪನಿಷತು)**

ಯಾರು (ಅವನು) ಸರ್ವಜ್ಞನು, ಎಲ್ಲವನ್ನು ತಿಳಿದವನು ಆಗಿರುವನೋ (ನು)

**ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೇಸ್ವಾಭಾವಿಕೀ**
**ಜ್ಞಾನಬಲಕ್ರಿಯಾಂ ಚ । (ಶ್ವೇತಾಶ್ವತರಉಪನಿಷತ್ತು)**

ಅವನು ಅನೇಕ ಅದ್ಭುತ ಶಕ್ತಿಗಳನ್ನು ಹೊಂದಿದ್ದಾನೆ. ಜ್ಞಾನ, ಬಲ, ಕ್ರಿಯೆ ಇವುಗಳು ಅವನ ಸ್ವಾಭಾವಿಕ ಗುಣಗಳು.

**ಅಪಹತಪಾಪ್ಮಾವಿರಜೋ ವಿಮೃತ್ಯುರ್ವಿಶೋಕೋ**
**ವಿಜಿಘತ್ಸೋಽ ಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ।**
**(ಛಾಂದೋಗ್ಯ ಉಪನಿಷತ್ತು)**

ಅವನು ಪಾಪವಿದೂರನು, ಮುಪ್ಪಿಲ್ಲದವನು, ಮರಣ, ಶೋಕ, ಹಸಿವು, ತೃಷೆಗಳಿಂದ ಮುಕ್ತನು, ಅವನ ಯಾವುದೇ ಆಶೆಗಳು, ಯಾವುದೇ ಸಂಕಲ್ಪಗಳು ಎಂದೂ ಸತ್ಯಕ್ಕೆ ದೂರತಲ್ಲವು.

**ನಾರಾಯಣಃ ಪರಂಬ್ರಹ್ಮ ತತ್ವಂ ನಾರಾಯಣಃ ಪರಃ ।**
**(ತೈತ್ತಿರೀಯ ನಾರಾಯಣೋಪನಿಷತ್ತು)**

ನಾರಾಯಣನೇ ಪರಬ್ರಹ್ಮ ಅವನೇ ಅಂತಿಮ ಸತ್ಯ.

**ನಾರಾಯಣ ಏವೇದಂ ಸರ್ವಂ ।**
**(ನಾರಾಯಣ-ಅಥರ್ವ-ಶಿರ-ಉಪನಿಷತ್ತು)**

ಇದೆಲ್ಲವೂ ನಾರಾಯಣನೇ.

**ನಿಷ್ಕಲೋ ನಿರಂಜನೋ ನಿರ್ವಿಕಲ್ಪೋನಿರಾಖ್ಯಾತಃ**
**ಶುದ್ಧೋದೇವ ಏಕೋ ನಾರಾಯಣಃ ।**
(ನಾರಾಯಣೋಪನಿಷತ್ತು)

ನಾರಾಯಣನೊಬ್ಬನೇ ಕಲಂಕರಹಿತನು, ಪಾಪರಹಿತನು, ವಿಕಲ್ಪರಹಿತನು, ನಾಮ ರಹಿತನು, ಶುದ್ಧನು, ಎಲ್ಲವನ್ನು ಪ್ರಕಟಪಡಿಸುವವನೂ ಆಗಿದ್ದಾನೆ.

**ಏಕೋವೈನಾರಾಯಣ ಆಸೀತ್ ।·ನ ಬ್ರಹ್ಮಾ**
**ನೇಶಾನೋ ನೇಮೇದ್ಯಾವಾ ಪೃಥಿವೀ ನ ನಕ್ಷತ್ರಾಣಿ**
**ನಾಪೋನಾಗ್ನಿರ್ನಯಮೋ ನ ಸೂರ್ಯ ಇತಿ ।**
**(ಮಹೋಪನಿಷತ್ತು)**

ನಾರಾಯಣ ಒಬ್ಬನೇ ಇದ್ದನು. ಆಗ ಬ್ರಹ್ಮ ಶಿವ, ಭೂಮಿ, ಆಕಾಶ, ನಕ್ಷತ್ರಗಳು, ನೀರು, ಅಗ್ನಿ, ಯಮ, ಸೂರ್ಯ ಯಾರೂ, ಯಾವುದೂ ಇರಲಿಲ್ಲ.

ಅಲ್ಲದೆ ಭಕ್ತಿ ಗ್ರಂಥಗಳೂ ಸಹ '**ಹರಿಸರ್ವೋತ್ತಮ, ಹರಿಸರ್ವೋತ್ತಮ, ಹರಿಸರ್ವೋತ್ತಮ**ನೆಂದು ಸಾರಿವೆ.

ಹೀಗೆ ಕೂರೇಶನು ವೇದೋಪನಿಷತ್ತುಗಳ, ವೇದ ಪುರಾಣಗಳ, ಭಕ್ತಿಗ್ರಂಥಗಳ ಅನೇಕ ಸೂಕ್ತಿಗಳನ್ನು ಉದಾಹರಿಸಲಾಗಿ ಯಾದವರು ಮೂಕರಾಗಿಬಿಟ್ಟರು.

ಹಿಂದೆ ತಾನು ಮಾಡಿದ್ದ ಪ್ರಾಣಾಂತಕ ಸಂಚು, ತಾಯಿಯ ಉಪದೇಶ, ಶ್ರೀ ವರದರಾಜನು ಕಾಂಚೀಪೂರ್ಣರ ಮೂಲಕ ಕೊಡಿಸಿದ ಉಪದೇಶ ಎಲ್ಲವೂ ಯಾದವರ ನೆನಪಿಗೆ ಬಂದವು. ಆಗ ತನ್ನ ಒಣತರ್ಕದಿಂದ ಏನೂ ಪ್ರಯೋಜನವಿಲ್ಲವೆಂಬುದು ಅರ್ಥವಾಯಿತು. ಇದ್ದಕ್ಕಿದ್ದ ಹಾಗೆ ರಾಮಾನುಜರ ಪಾದಗಳಿಗೆರಗಿ, ಘಟ್ಟಿಯಾಗಿ ಪಾದಗಳನ್ನು ಹಿಡಿದುಕೊಂಡರು. ರಾಮಾನುಜರು ಎಷ್ಟೇ ಪ್ರಯತ್ನಪಟ್ಟರೂ ಯಾದವರು ಪಾದಗಳನ್ನು ಬಿಡಲಿಲ್ಲ. ಪಾದಗಳ ಮೇಲೆ ಕಣ್ಣೀರು ಸುರಿಸುತ್ತಾ ಹೇಳಿದರು – "ಓ ರಾಮಾನುಜ, ನೀನು ನಿಜಕ್ಕೂ ಶ್ರೀ ರಾಘವನ ತಮ್ಮನೇ ಹೌದು. ಅಜ್ಞಾನದಿಂದಾಗಿ ನಿನ್ನ ನಿಜತತ್ತ್ವವನ್ನು ತಿಳಿಯಲಾರದೇ ಹೋದೆ. ನನ್ನ ಶಿಕ್ಷಾರ್ಹವಾದ ಘೋರ ತಪ್ಪುಗಳನ್ನೆಲ್ಲಾ ಕ್ಷಮಿಸು, ನನ್ನ ಕರ್ಣಧಾರನಾಗಿ ನನ್ನನ್ನು ಈ ಘೋರ ಸಂಸಾರ ಸಾಗರದಿಂದ ದಾಟಿಸು. ನಾನು ನಿನ್ನ ಶರಣು ಬಂದಿದ್ದೇನೆ.

ರಾಮಾನುಜರಿಂದ ಈ ದೈನ್ಯತೆಯ ದೃಶ್ಯವನ್ನು ನೋಡಲಾಗಲಿಲ್ಲ, ಯಾದವ ಪ್ರಕಾಶರ ಈ ದೀನ ಸ್ಥಿತಿಯನ್ನು ನೋಡಿ ಮಮ್ಮಲ ಮರುಗಿದರು. ಕೂಡಲೇ ಅವರನ್ನು ಮೇಲೆತ್ತಿ ಅಪ್ಪಿಕೊಂಡರು. ಯಾದವರ ಮನಸ್ಸಿನ ಅಶಾಂತತೆಯನ್ನು ದೂರ ಮಾಡಿದರು.

ತಾಯಿಯ ಅಪ್ಪಣೆ ಪಡೆದು ಯಾದವ ಪ್ರಕಾಶರು ತಮ್ಮ ಹಿಂದಿನ ಶಿಷ್ಯರಿಂದಲೇ, ರಾಮಾನುಜರಿಂದಲೇ ಸನ್ಯಾಸ ದೀಕ್ಷೆಯನ್ನು ಪಡೆದರು. ಅವರಿಂದಲೇ ಪಂಚ–ಸಂಸ್ಕಾರ

ಮಾಡಿಸಿಕೊಂಡು, ಊರ್ಧ್ವಪುಂಡ್ರವನ್ನು ಹಾಗೂ ಕಾಷಾಯವಸ್ತ್ರವನ್ನು ಧರಿಸಿದರು. ಅಂದಿನಿಂದ ಅವರ ಗುರುಗಳಾದ ರಾಮಾನುಜರು ಯಾದವರಿಗೆ**ಗೋವಿಂದ ಜೀಯರ್** ಎಂದು ನಾಮಕರಣ ಮಾಡಿದರು.

ಆಗ ಯಾದವರಿಗೆ ಪರಮಾನಂದವಾಯ್ತು. ತಮ್ಮ ಭಕ್ತಿ ಮಾರ್ಗದ ಕಡೆ ಇದ್ದ ತಾತ್ಸಾರ ಬುದ್ಧಿ-ಮಾಯವಾಯ್ತು. ಅವರು ನಿಜಕ್ಕೂ ತತ್ಪರ ವೈಷ್ಣವರಾದರು.

**ರಾಮಾನುಜರು:** ಪೂಜ್ಯರೇ, ಈಗ ನೀವು ಶುದ್ಧರಾಗಿರುವಿರಿ. ಪಾಪರಹಿತರಾಗಿರುವಿರಿ. ನೀವು ವೈಷ್ಣವ ಧರ್ಮದ ಮೇಲೆ ಒಂದು ಗ್ರಂಥವನ್ನು ಬರೆಯಿರಿ; ಅದರಲ್ಲಿ ವೈಷ್ಣವನ ಕರ್ತವ್ಯಗಳೇನೆಂಬುದನ್ನು ವಿವರಿಸಿ. ಆಗ ನಿಮಗೆ ಪರಮಶಾಂತಿ ದೊರಕುತ್ತದೆ".

ಗುರುವಿನಾಜ್ಞೆಯಂತೆ ಯಾದವರು ಅದ್ವಿತೀಯ ವೈಷ್ಣವ ಗ್ರಂಥವನ್ನು ಬರೆದು **"ಯತಿ ಧರ್ಮಸಮುಚ್ಚಯ"** ಎಂಬ ಹೆಸರಿಟ್ಟು ತಮ್ಮ ಗುರುಗಳ ಪಾದ ಕಮಲಗಳಿಗೆ ಅರ್ಪಿಸಿದರು.

ಎಲ್ಲರೂ ಆನಂದಭರಿತರಾಗಿ ಹರಿಭಜನೆ ಮಾಡಿದರು.

**ರಾಗ-ಕಾಂಭೋದಿ** **ಆದಿತಾಳ**

,ಹರಿಯಭಜಿಸಿರೋ । ಹರಿಯಭಜಿಸಿರೋ ।
,ಹರಿಯನಾಮ । ನೆನೆಯಿರೋಸರ್ವದಾ ॥ಪ॥
,ಹರಿಸರ್ವೋತ್ತಮ । ನೆಂಬುದಮರೆಯದೆ ।
,ಬರಿಭ್ರಮೆಯಿಂದಲಿ । ಮೆರೆಯದೆ ನಿರತವು ॥೧॥

,ಹರಿಯಶಂಖಚಕ್ರ । ಮುದ್ರೆಗಳನೆಧರಿಸಿ ।
,ಗುರುವಿನಿಂದೀಕ್ಷೆಯ । ಪಡೆದವನಭಜಿಸೆ ।
,ಹರಿಯುಎಮ್ಮಯ । ದುರಿತಗಳೆಲ್ಲವನು ।
,ಪರಿಹರಿಸುವನು । ಕರುಣಾಸಾಗರನು ॥೨॥

ಹೀಗೆ ಅದ್ವೈತಿಗಳೂ ಶ್ರೇಷ್ಠಪಂಡಿತರೂ ಆಗಿದ್ದ ಯಾದವ ಪ್ರಕಾಶರು ಯತಿರಾಜರ ಶಿಷ್ಯರಾಗಿ ಭಕ್ತಿ ಮಾರ್ಗವೇ ಶ್ರೇಷ್ಠವೆಂದು ತಿಳಿದು, ಸಾಕಾರಮೂರ್ತಿ ಶ್ರೀ ವರದರಾಜನ ಸೇವೆ ಮಾಡುತ್ತಾ ಕೆಲವು ಕಾಲದ ನಂತರ ಪರಮಪದವನ್ನು ಸೇರಿದರು.

— ❋ —

# 13

# ರಾಮಾನುಜರ ತಮ್ಮ ಗೋವಿಂದರು ವೈಷ್ಣವ ಧರ್ಮಾವಲಂಬಿಯಾದುದು

ರಾಮಾನುಜರನ್ನು ಶ್ರೀರಂಗಕ್ಕೆ ಕರೆತರಲು ಹೋಗಿದ್ದ ಮಹಾಪೂರ್ಣರು ರಾಮಾನುಜರಿಗೆ ತಮಿಳು ಪ್ರಬಂಧಗಳನ್ನು ಬೋಧಿಸಿ, ಮಧ್ಯದಲ್ಲೇ ಕಂಚಿಯನ್ನು ಬಿಟ್ಟು ಶ್ರೀರಂಗಕ್ಕೆ ಹಿಂದಿರುಗಿದರೆಂಬುದು ನಮಗೆ ತಿಳಿದ ವಿಷಯವೇ ಆಗಿದೆ.

ಇತ್ತೀಚಗೆ ರಾಮಾನುಜರು ಸನ್ಯಾಸ ಸ್ವೀಕರಿಸಿದರೆಂಬ ಸುದ್ದಿ ಮಹಾಪೂರ್ಣರಿಗೆ ತಿಳಿಯಿತು. ಅವರು ಬಹಳ ಸಂತೋಷಪಟ್ಟರು. ಶ್ರೀರಂಗದ ಮಠದ ಪೀಠವು ಈಗಲೂ ಸಹ ಸರಿಯಾದ ವಿದ್ವನ್ಮಣಿಗಳು ಸಿಕ್ಕದೆ ಖಾಲಿ ಇದ್ದಿತು.

ಕೂಡಲೇ ಮಹಾಪೂರ್ಣರು ಶ್ರೀರಂಗನಾಥನ ದೇವಸ್ಥಾನಕ್ಕೆ ಹೋದರು, ಅಲ್ಲಿ ಅನಂತಶಾಯಿಯೂ ಪರಬ್ರಹ್ಮನೂ ಆದ ಸ್ವಾಮಿ ರಂಗನಾಥನನ್ನು ಕೈಜೋಡಿಸಿ ಪ್ರಾರ್ಥಿಸಿದರು – "ಹೇ ದೀನರಕ್ಷಕ, ನಮ್ಮ ಇಷ್ಟಾರ್ಥವನ್ನು ಈಡೇರಿಸಲು ರಾಮಾನುಜರನ್ನು ನಿನ್ನ ಸನ್ನಿಧಿಗೆ ಕರೆಸುವ ಕೃಪೆ ಮಾಡು".

ಶ್ರೀರಂಗನಾಥನು ಮಹಾಪೂರ್ಣರಿಗೆ ತಿಳಿಸಿದನು – "ಮಗು, ಮಹಾಪೂರ್ಣ, ಭಕ್ತಿಗೀತೆಗಳನ್ನು ಬಹಳ ಚೆನ್ನಾಗಿ ಹಾಡುವ, ಸಂಗೀತದಲ್ಲಿ ನಿಪುಣನಾದ ವರರಂಗನನ್ನು ಕಾಂಚೀಪುರಕ್ಕೆ ಕಳುಹಿಸು. ಅವನು ಅಲ್ಲಿಯ ಶ್ರೀ ವರದರಾಜನ ಸನ್ನಿಧಿಯಲ್ಲಿ ಭಕ್ತಿ ಹಾಡುಗಳನ್ನು ಹಾಡಲಿ, ಸಂಗೀತ ಪ್ರಿಯನಾದ ವರದರಾಜನು ವರರಂಗನ ಸಂಗೀತಕ್ಕೆ ಮಾರುಹೋಗಿ ವರವನ್ನು ಕೊಡಲು ಸಿದ್ಧನಾಗುತ್ತಾನೆ. ಆಗ ವರರಂಗನು ರಾಮಾನುಜರನ್ನು

ತನ್ನೊಂದಿಗೆ ಶ್ರೀರಂಗಕ್ಕೆ ಕಳುಹಿಸಿಕೊಡೆಂದು ಕೇಳಲಿ, ಯತಿರಾಜನು ವರದರಾಜನ ಪಾದಗಳನ್ನು ಬಿಟ್ಟು ಯಾವ ಕಾರಣಕ್ಕೂ ಬೇರೆ ಕಡೆ ಬರುವುದಿಲ್ಲ".

ಅಂತೆಯೇ ವರರಂಗರು ಸಂಗೀತದಿಂದ ಶ್ರೀ ವರದರಾಜನನ್ನು ಮೆಚ್ಚಿಸಿ, ಯತಿರಾಜರನ್ನು ತನ್ನೊಡನೆ ಕಳುಹಿಸಿಕೊಡುವಂತೆ ಪ್ರಾರ್ಥಿಸಿದರು. ವರದರಾಜನಿಗೆ ಯತಿರಾಜರನ್ನು ಬಿಟ್ಟು ಕೊಡುವುದು ಕಷ್ಟವಾಗಿ ಕಂಡರೂ ಭಕ್ತರಾಧೀನನಾದ ವರದರಾಜನು ಒಪ್ಪಿ ಯತಿರಾಜರನ್ನು ವರರಂಗರೊಂದಿಗೆ ಕಳುಹಿಸಿದನು.

ರಾಮಾನುಜರು ಶ್ರೀರಂಗಕ್ಕೆ ಬಂದ ಕೂಡಲೆ ಶ್ರೀ ರಂಗನಾಥನ ದರ್ಶನ ಮಾಡಿ ಭಕ್ತಿಯಿಂದ ಆರಾಧಿಸಿದರು. ರಾಮಾನುಜರ ಭಕ್ತಿಗೆ ಮೆಚ್ಚಿ ಶ್ರೀ ರಂಗನಾಥನು ಎರಡು ದೈವಿಕಶಕ್ತಿಗಳನ್ನು ದಯಪಾಲಿಸಿದನು.**ಮೊದಲನೆಯದು** – ರೋಗಪೀಡಿತರ ರೋಗವನ್ನು ಪರಿಹರಿಸುವ ಶಕ್ತಿ.**ಎರಡನೆಯದು** – ದೈವಭಕ್ತರನ್ನು ಸದಾರಕ್ಷಿಸುವ ಶಕ್ತಿ. ಇವುಗಳನ್ನು ಪಡೆದು ರಾಮಾನುಜರು ದಿವ್ಯತೇಜೋಮಯ ಮೂರ್ತಿಗಳಾದರು. ಎಲ್ಲೆಲ್ಲೂ ರಾಮಾನುಜರು ಶ್ರೀರಂಗಕ್ಕೆ ಬಂದಿರುವ ಸುದ್ದಿ ಹರಡಿತು. ಅಸಂಖ್ಯ ವೈಷ್ಣವರು ದೂರ ಪ್ರದೇಶಗಳಿಂದ ರಾಮಾನುಜರ ದರ್ಶನಕ್ಕಾಗಿ ಶ್ರೀರಂಗಕ್ಕೆ ಬಂದರು.

ಈ ಸಮಯದಲ್ಲಿ ರಾಮಾನುಜರಿಗೆ, ತಮ್ಮನಾದ ಗೋವಿಂದನ ನೆನಪಾಯಿತು.

ಗೋವಿಂದನೂ ಸಹ ಶಿವನ ಪರಮಭಕ್ತನಾಗಿದ್ದನು. ಒಳ್ಳೆಯ ವಿದ್ವತ್ತನ್ನು ಗಳಿಸಿದ್ದನು. ಅಲ್ಲದೆ ರಾಮಾನುಜರನ್ನು ಕೊಲೆ ಮಾಡುವ ಯಾದವ ಪ್ರಕಾಶರ ಒಳಸಂಚಿನಿಂದ ಪಾರುಮಾಡಿದ್ದನು. ಆದ್ದರಿಂದ ಗೋವಿಂದನನ್ನು ತಮ್ಮ ಬಳಿ ಕರೆಸಿಕೊಳ್ಳುವ ಚಿಂತೆ ರಾಮಾನುಜರನ್ನು ಕಾಡತೊಡಗಿತು. ಗೋವಿಂದನೂ ಸಹ ಈ ಪರಮಾನಂದದಲ್ಲಿ ಭಾಗಿಯಾಗಲೆಂಬ ಮಹದಾಶೆ ರಾಮಾನುಜರಿಗಿತ್ತು. ಗೋವಿಂದನನ್ನು ಕಾಳಹಸ್ತಿಯಿಂದ ಕರೆಸಿಕೊಳ್ಳಲು ರಾಮಾನುಜರು ಶ್ರೀ ಶೈಲಪೂರ್ಣರಿಗೆ ಒಂದು ಪತ್ರ ಬರೆದರು.

ಪತ್ರ ಕೈಸೇರುತ್ತಲೇ ಅವರು ತಮ್ಮ ಶಿಷ್ಯರೊಡಗೂಡಿ ಕಾಳಹಸ್ತಿ ಸೇರಿ ಅಲ್ಲಿಯ ದೊಡ್ಡ ಸರೋವರದ ಬಳಿ ಬೀಡು ಬಿಟ್ಟರು.

ಗೋವಿಂದನು ನಿತ್ಯವೂ ಅಲ್ಲಿಗೆ ಸ್ನಾನಕ್ಕೆ ಹಾಗೂ ಹೂವಿಗಾಗಿ ಬರುತ್ತಿದ್ದನು.

ಒಂದು ದಿನ ಗೋವಿಂದನು ಬಿಳಿಗಡ್ಡದ ಒಬ್ಬ ವೈಷ್ಣವರನ್ನು ಅಪುಷ್ಕರಣಿಯ ಬಳಿಕಂಡನು. ಅವರು ತಮ್ಮ ಶಿಷ್ಯರೊಂದಿಗೆ ಶಾಸ್ತ್ರಗಳ ಚರ್ಚೆ ಮಾಡುತ್ತಿದ್ದರು.

ಕುತೂಹಲದಿಂದ ಗೋವಿಂದನು ಪಕ್ಕದಪಾಟಲಿ ಮರವನ್ನೇರಿ ಹೂ ಬಿಡಿಸುತ್ತಾ ಅವರ ಸಂಭಾಷಣೆಯನ್ನು ಕೇಳಿಸಿಕೊಂಡನು. ಇದರಿಂದ ಆ ಮಹಾನ್ ವೈಷ್ಣವರ ಬಗ್ಗೆ ಭಕ್ತಿ ಮೂಡಿತು.

ಹೂ ಬಿಡಿಸಿ ಸ್ನಾನಕ್ಕೆಂದು ಕೊಳದ ಬಳಿ ಗೋವಿಂದ ಬಂದಾಗ ಶೈಲಪೂರ್ಣರು ಪ್ರಶ್ನಿಸಿದರು – "ಮಹಾತ್ಮ ಯಾರನ್ನು ಪೂಜಿಸಲು ಈ ಹೂಗಳು"?

ಶೈಲಪೂರ್ಣರಿಗೆ ತಿಳಿದಿತ್ತು. ಗೋವಿಂದ ಶಿವನಾರಾಧಕನೆಂದು. ಆದ್ದರಿಂದ ಮತ್ತೆ ಪ್ರಶ್ನಿಸಿದರು – "ಶಿವನು ಎಲ್ಲ ಆಶೆಗಳನ್ನು ಭಸ್ಮಗೊಳಿಸಿ, ಆಭಸ್ಮವನ್ನೇ ತನ್ನ ಹಣೆಯ ಮೇಲೆ ಲೇಪಿಸಿಕೊಂಡು ವಿಭೂತಿಭೂಷಣನಾಗಿದ್ದಾನೆ. ಸಾಲದಕ್ಕೆ ಸ್ಮಶಾನ ವಾಸಿ ಹಾಗೂ ನಾರಾಯಣನ ಪ್ರೇಮಿ. ಅಂತಹವನಿಗೆಈ ಹೂಗಳು ಪ್ರಿಯವೆ?".

"ಈ ಹೂಗಳು ಆದಿಅಂತ್ಯವಿಲ್ಲದ, ಸದ್ಗುಣಭರಿತನಾದ, ತನ್ನ ಪವಿತ್ರ ಹೃದಯ ಕಮಲದಿಂದ ಈ ಸಂಸಾರವನ್ನು ಸೃಷ್ಟಿಸಿದ, ಎಲ್ಲ ಜೀವಿಗಳಿಗೂ, ಬ್ರಹ್ಮನಿಂದ ಒಂದು ಹುಲ್ಲುಗರಿಕೆಗೂ ಸಹ ಆಶ್ರಯದಾತನಾದ ಆ ಶ್ರೀಮದ್ ವಿಷ್ಣುವಿನ ಪಾದಗಳಲ್ಲಿ ಸುಂದರವಾಗಿ ಶೋಭಿಸುತ್ತವೆ".

"ನಿನ್ನಂತಹ ಜ್ಞಾನಿ ಈ ಹೂಗಳನ್ನು ಶಿವನಿಗೆ ಅರ್ಪಿಸುವುದನ್ನು ನೋಡಿದರೆ ಆಶ್ಚರ್ಯವಾಗಿದೆ".

**ಗೋವಿಂದ:** ಸ್ವಾಮಿ, ತಮ್ಮ ಮಾತು ನಿಜ. ಈ ಜಗತ್ತಿನ ಎಲ್ಲ ವಸ್ತುಗಳು, ಎಲ್ಲ ಸಂಪತ್ತು, ಸರ್ವಸ್ವವು ಆ ಶಂಕರನದೇ ಆದ ಮೇಲೆ, ವಿಷವನ್ನೇ ನುಂಗಿದ ಆ ವಿಷಕಂಠನಿಗೆ ನಾವು ಅರ್ಪಿಸುವುದೇನಿದೆ. ನಮ್ಮ ಒಳಿತಿಗಾಗಿಯೇ ನಾವು ಅವನನ್ನು ಸೇವಿಸಬೇಕು. ಆದರೆ ಅವನು ಭಕ್ತಪ್ರಿಯ. ಅವನಿಗೆ ನಮ್ಮ ಅನನ್ಯಭಕ್ತಿಯನ್ನು ಅರ್ಪಿಸಬೇಕು. ಹೂವು, ಗಂಧಗಳ ಅರ್ಪಣೆಯಿಂದ ನಮ್ಮ ಭಕ್ತಿ ಹೆಚ್ಚುತ್ತದೆ. ಈ ದೃಷ್ಟಿಯಿಂದ ಅವನ ಅರ್ಚನೆ ಮುಖ್ಯ.

**ಶೈಲಪೂರ್ಣರು:**

**ರಾಗ-ಹಂಸಾನಂದಿ** **ಝಂಪೆತಾಳ**

,ಅರಿಯದಾದಿರಿಗೋವಿಂದ । ನಲೀಲೆಯಗೋವಿಂದರೆ ॥ಪ॥
,ಹರಿಯೆಸರ್ವೋತ್ತಮ । ನೆಂಬುದ ತಿಳಿಯದೆ ।

,ಪರಿಪರಿಭವಣೆಯಲಿ । ಕಾಲವತಳ್ಳುವಿರಿ ।
,ಕರಿವರದನಲೀಲೆ । ಅಪ್ಪಿಷ್ಟಲ್ಲವೊ ॥೧॥

,ದಾನದಲಿಎನಗಾರು । ಸಮರಿಲ್ಲವೆಂದೆಂಬ ।
,ದಾನವರಪ್ರಭುವಾದ । ಬಲಿಯಗರ್ವವ ಮುರಿಯೆ ।
,ದಾನವಾಂತಕಹರಿಯೆ । ವಾಮನನಾಗಿ ಬಂದವಗೆ ।
,ದೀನನಾಗಿ ತನ್ನಾತ್ಮವನು । ಸಮರ್ಪಿಸುವುದೇಹರಿಪೂಜೆ ॥೨॥

ಶಿವನಿಗೆ ಇಂತಹ ಲೀಲೆಗಳು ಹಿಡಿಸುವುದಿಲ್ಲ. ಇಂತಹ ಲೀಲಾಮಯನಾದ ಹರಿಯನ್ನಾರಾಧಿಸಿ, ಮಧುರ ಅಮೃತವನ್ನು ಸವಿಯದೆ ಶಂಕರನನ್ನು ಪೂಜಿಸುತ್ತಿರುವಿರಿ. ಇದಲ್ಲದೆ ನೀವು ವೈಷ್ಣವ ಕುಟುಂಬದವರಾದ ಮೇಲೆ ವೈಷ್ಣವ ಧರ್ಮವನ್ನೇ ಅವಲಂಬಿಸಬೇಕು. ಶ್ರೀ ಕೃಷ್ಣನ ವಾಣಿಯನ್ನು ನೆನಪು ಮಾಡಿಕೊಳ್ಳಿ. ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋಭಯಾವಹಃ

(ಗೀತೆ-3ನೇ ಅಧ್ಯಾಯ-35ನೇ ಶ್ಲೋಕ)

ಭಯಪೂರ್ಣವಾದ ಪರಧರ್ಮಕ್ಕಿಂತ ಸ್ವಧರ್ಮದಲ್ಲಿ ಮರಣವನ್ನಪ್ಪುವುದು ಲೇಸು.

**ಗೋವಿಂದ:** ಪೂಜ್ಯರೇ, ತಾವು ಹರಿಹರರಲ್ಲಿ ಭೇದವನ್ನೇಕೆ ಕಲ್ಪಿಸುವಿರಿ. ಘಂಟಾ ಕರ್ಣನಂತಹವನ ಭಕ್ತಿ ಪ್ರಶಂಸನೀಯವಲ್ಲ. ಶಾಸ್ತ್ರಗಳೂ ಇದನ್ನೇ ಹೇಳುತ್ತವೆ.

### ಘಂಟಾಕರ್ಣನ ಕಥೆ

ಒಂದು ಊರಿನಲ್ಲಿ ಒಬ್ಬ ಶಿವಭಕ್ತನಿದ್ದ. ಅವನು ಶಿವನನ್ನು ಬಿಟ್ಟು ಇತರೆ ದೇವರುಗಳನ್ನು ದ್ವೇಷಿಸುತ್ತಿದ್ದ. ಒಂದು ದಿನ ಅವನಿಗೆ ಬುದ್ಧಿಹೇಳಲು ಶಿವನು ತಾನೇ ಪ್ರತ್ಯಕ್ಷನಾದ. "ನೀನು ಎಲ್ಲಿಯವರೆಗೆ ಇತರೆ ದೇವರುಗಳನ್ನು ದ್ವೇಷಿಸುತ್ತೀಯೋ, ಅಲ್ಲಿಯವರೆಗೆ ನಾನು ನಿನ್ನ ಪೂಜೆಯಿಂದ ತೃಪ್ತನಾಗುವುದಿಲ್ಲ" ಎಂದು ತಿಳಿಸಿದನು.

ಅದಕ್ಕೂ ಅವನು ತಲೆ ಬಾಗಲಿಲ್ಲ. ಮತ್ತೊಮ್ಮೆ ಶಿವನು 'ಹರಿ-ಹರ' ರೂಪ ಧರಿಸಿ ಆ ಭಕ್ತನ ಎದುರು ನಿಂತ. ಹರನ ರೂಪಿನ ಕಡೆ ಮಾತ್ರ ನಮಸ್ಕರಿಸಿದ. ಪ್ರಸಾದವನ್ನು ಅರ್ಪಿಸಿದ. ಸುಗಂಧ ಊದುಬತ್ತಿಯನ್ನು ಹರನ ಮೂಗಿನ ಕಡೆ ಇಟ್ಟು ಹರಿಯ ಮೂಗನ್ನು ಬೆರಳುಗಳಿಂದ ಮುಚ್ಚಿದ.

ಆ ಊರಿನಲ್ಲಿ ಇವನು ಇಂತಹ ಹಠವಾದಿ ಎಂದು ಗೊತ್ತಾದ ಮೇಲೆ ಹುಡುಗರು ಅವನ ಮುಂದೆ ವಿಷ್ಣು, ವಿಷ್ಣು ಎಂದು ಕೂಗುತ್ತ ಗೇಲಿ ಮಾಡುತ್ತಿದ್ದರು. ಆಗ ಅವನು ವಿಷ್ಣು ಎಂಬ ಶಬ್ದ ತನ್ನ ಕಿವಿಗಳಿಗೆ ಬೀಳದಿರಲಿ ಎಂದು ಎರಡು ಕಿವಿಗಳಿಗೂ ಎರಡು ಘಂಟೆಗಳನ್ನು ಕಟ್ಟಿಕೊಂಡು ತಿರುಗುತ್ತಿದ್ದ. ಯಾರಾದರೂ ವಿಷ್ಣುವಿನ ಹೆಸರು ಹೇಳಿದರೆ ಘಂಟೆಗಳನ್ನು ಜೋರಾಗಿ ಅಲ್ಲಾಡಿಸುತ್ತಿದ್ದನು. ಹೀಗಾಗಿ ಅವನನ್ನು ಘಂಟಾಕರ್ಣನೆಂದು ಕರೆದರು.

ಅಂತೂ ಪ್ರತಿ ದಿನವೂ ಗೋವಿಂದನಿಗೂ ಶೈಲಪೂರ್ಣರಿಗೂ ವಾಗ್ವಾದಗಳು ನಡೆಯುತ್ತಲೇ ಇದ್ದವು. ಆದರೆ ಕಡೆಗೆ ಗೋವಿಂದರು ವೈಷ್ಣವಧರ್ಮವನ್ನು ಅವಲಂಬಿಸಿದರು. ಶೈಲಪೂರ್ಣರಿಂದ ದೀಕ್ಷೆ ಪಡೆದರು. ದೀಕ್ಷೆಯ ನಂತರ ರಾಮಾನುಜರನ್ನು ಸೇರಿ ಅವರೊಂದಿಗೆ ದಿನಗಳನ್ನು ಕಳೆದರು.

ಈ ರೀತಿ ಭಕ್ತಿಯಲ್ಲಿ ಅನೇಕ ವಿಧಗಳಿವೆ. ಘಂಟಾಕರ್ಣನ ಕಥೆಯಲ್ಲಿ 'ಏಕಾಗ್ರತೆಭಕ್ತಿ'ಯ ಅರಿವಾಗುತ್ತದೆ.

**ಜ್ಞಾನಮಿಶ್ರಭಕ್ತಿ:** ವೇದಶಾಸ್ತ್ರಗಳು ಸೃಷ್ಟಿಸಿರುವ ನಿರಾಕಾರ, ಸರ್ವವ್ಯಾಪಿ, ಎಲ್ಲರಲ್ಲೂ ಆತ್ಮಸ್ವರೂಪಿಯಾಗಿರುವ ಬ್ರಹ್ಮನಪೂಜೆ (ಧ್ಯಾನ). ವೇದಾಧ್ಯಯನ, ತಪಸ್ಸು, ಪಾವಿತ್ರತೆ, ತೃಪ್ತಿ, ಸಂಯಮ ಹಾಗೂ ಸತ್ಯ–ಸ್ಥಿರತೆ ಇವುಗಳನ್ನೊಳಗೊಂಡ ಧ್ಯಾನಾಸಕ್ತ ಜೀವನವನ್ನು ಸಾಗಿಸಿದರೆ ಮಾಯೆ ತಾನೇ ದೂರವಾಗುತ್ತೆ. ಅಂತಹವನು ದೇವರನ್ನು ಸಾಕ್ಷಾತ್ಕರಿಸಿ ಕೊಳ್ಳಬಲ್ಲನು. ಇದೇ ಜ್ಞಾನಮಿಶ್ರ ಭಕ್ತಿಯ ಸಾರ.

**ಶುದ್ಧಭಕ್ತಿ:** ಇದೇ ಸಗುಣಭಕ್ತಿ. ಇದರಲ್ಲಿ ಎರಡು ವಿಧ–ವೈಧೀ ಮತ್ತು ರಾಗಾನುಗಾ.

ನಾನಾ ವಸ್ತುಗಳಲ್ಲಿ ದೇವರನ್ನು ಕಲ್ಪಿಸಿಕೊಂಡು ವೇದಶಾಸ್ತ್ರ ವಿಹಿತ ಜಪ, ತಪ, ಹೋಮ, ಧ್ಯಾನಾದಿಗಳನ್ನು ಮಾಡುವುದೇ '**ವೈಧೀ**' ಭಕ್ತಿ.

ಈ ಭಕ್ತಿಯೊಂದಿಗೆ ಪ್ರೇಮವನ್ನು ಬೆರಸಿದರೆ ಅದೇ '**ರಾಗಾನುಗಾ**' ಭಕ್ತಿ. ಈ ಭಕ್ತಿ ಹೆಚ್ಚಿದಂತೆಲ್ಲಾ ದೇವರು ನಮಗೆ ಪ್ರಿಯನೂ, ಹತ್ತಿರದವನೂ ಆಗುತ್ತಾನೆ. ವೈಕುಂಠ ಕೂಗಳತೆಯದಾಗುತ್ತೆ.

ಭಕ್ತರು ಪರಮಾತ್ಮನನ್ನು ತಮ್ಮ ಪ್ರಭು(ಸ್ವಾಮಿ), ಮಗ, ಸಖ, ಅಥವಾ ಪ್ರಿಯತಮನೆಂದು ಭಾವಿಸುತ್ತಾರೆ. ಈ ಪ್ರೇಮಮಾರ್ಗವೇ ಸರ್ವಶ್ರೇಷ್ಠ.

ಈ ಭಕ್ತಿಪಂಥದ ಅನುಯಾಯಿಗಳು ತಮ್ಮ ತಮ್ಮ ಕಲ್ಪನೆಗೆ ತಕ್ಕಂತೆ ಪರಮಾತ್ಮನ ಸ್ವರೂಪವನ್ನು ಕಾಣುತ್ತಾರೆ. ಯಶೋದೆಯಲ್ಲಿ ಪರಮಾತ್ಮನ ಬಗ್ಗೆ ಮಾತೃಪ್ರೇಮ, ಮಾರುತಿಯಲ್ಲಿ ದಾಸ್ಯ-ಭಕ್ತಿ ಬೃಂದಾವನದ ಗೋಪಬಾಲರಲ್ಲಿ ಸಖಾಪ್ರೇಮ, ಗೋಪಿಯರಲ್ಲಿ ಪ್ರಿಯತಮಭಕ್ತಿ ಹೀಗೆ ಈ ರಾಗಾನುಗಾ ಭಕ್ತಿಯಲ್ಲಿ ಅನೇಕ ಭಾವನೆಗಳು ತುಂಬಿ ತುಳುಕುತ್ತಿವೆ.

**ರಾಗ-ಹಿಂದುಸ್ಥಾನಿಕಾಪಿ** **ಆದಿತಾಳ**

ಜಗದುದ್ಧಾರನ ಆಡಿಸಿದಳೆಶೋದೆ ॥ಪ॥
ಜಗದುದ್ಧಾರನ ಮಗನೆಂದು ತಿಳಿಯುತ ।
ಸುಗುಣಾಂತರಂಗನ ಆಡಿಸಿದಳೆಶೋದೆ ॥ಅ॥
ನಿಗಮಕೆ ಸಿಲುಕದ ಅಗಣಿತಮಹಿಮನ ।
ಮಗುಗಳಮಾಣಿಕ್ಯನ ಆಡಿಸಿದಳೆಶೋದೆ ॥೧॥

ಅಣೋರಣೀಯನ ಮಹತೋಮಹೀಯನ ।
ಅಪ್ರಮೇಯನ ಆಡಿಸಿದಳೆಶೋದೆ ॥೨॥

ಪರಮಪುರುಷನ ಪರವಾಸುದೇವನ ।
ಪುರಂದರವಿಠಲನ ಆಡಿಸಿದಳೆಶೋದೆ ॥೩॥
(ಪುರಂದರದಾಸರು)

ಹೀಗೆ ರಾಮಾನುಜರು ಶ್ರೀ ಶೈಲಪೂರ್ಣರ ಮೂಲಕ ಗೋವಿಂದರನ್ನು ಪುನಃ ವೈಷ್ಣವರನ್ನಾಗಿ ಪರಿವರ್ತಿಸಿದರು. ರಾಮಾನುಜರು ಗೋವಿಂದರ ಹೃದಯದಲ್ಲಿ ಪ್ರಪಂಚಕ್ಕೇ ಮಿಗಿಲೆನಿಸಿದ ಶ್ರೀಮನ್ನಾರಾಯಣನ ದೈವಿಕ ಸೌಂದರ್ಯದ ಪ್ರಕಾಶವನ್ನು ತುಂಬಿದರು. ಇದರಿಂದಾಗಿ ಗೋವಿಂದರು ಶುದ್ಧಪ್ರೇಮ ಭಕ್ತರಾದರು.

ಶ್ರೀರಂಗದ ಮಠವು ರಾಮಾನುಜರಿಂದ ಸ್ವರ್ಗದ ಬಾಗಿಲಾಯಿತು. ಅವರು ಅನೇಕ ಪಾಪಾತ್ಮರನ್ನುದ್ಧರಿಸಿದರು.

— ❋ —

# 14

# ಗೋಷ್ಠೀಪೂರ್ಣರು

ರಾಮಾನುಜರು ಶ್ರೀರಂಗಕ್ಕೆ ಬಂದು ಮಹಾಪೂರ್ಣರ ಶಿಷ್ಯರಾದ ಮೇಲೆ, ಯಾಮುನಾಚಾರ್ಯರ ಅಗಲುವಿಕೆಯಿಂದಾದ ದುಃಖವನ್ನು ಮರೆತರು. ನಿಜವಾದ ಮಾರ್ಗದರ್ಶಕ ಶಿಷ್ಯರಾದರು.

ಅವರು ನ್ಯಾಯತತ್ತ್ವ, ಗೀತಾರ್ಥಸಂಗ್ರಹ, ಸಿದ್ಧಿತ್ರಯ, ವ್ಯಾಸಸೂತ್ರ, ಪಾಂಚರಾತ್ರಾಗಮ–ಇವುಗಳ ಅಧ್ಯಯನ ಮಾಡಿದರು.

ಮಹಾಪೂರ್ಣರು ರಾಮಾನುಜರ ಜ್ಞಾನಕ್ಕೆ ಮಾರುಹೋಗಿ ತಮ್ಮ ಮಗ ಪುಂಡರೀಕನನ್ನು ಅವರ ಶಿಷ್ಯರನ್ನಾಗಿಸಿದರು.

**ಮಹಾಪೂರ್ಣರು:** "ಮಗು ರಾಮಾನುಜ, ಇಲ್ಲಿಗೆ ಸ್ವಲ್ಪ ದೂರದಲ್ಲಿ ತಿರುಕೋಟ್ಟಿಯೂರ್ ಅಥವಾ ಗೋಷ್ಠೀಪುರವೆಂಬ ಗ್ರಾಮವಿದೆ. ಅಲ್ಲಿ ಅದ್ವಿತೀಯ ಪಂಡಿತರು, ವೈಷ್ಣವ ಧರ್ಮಿಗಳೂ ಆದ ಗೋಷ್ಠೀಪೂರ್ಣರೆಂಬ ಒಬ್ಬರು ಜ್ಞಾನಿಗಳಿದ್ದಾರೆ. ಅವರ ಬಳಿ ನೀನು ಈಗಲೇ ಹೋಗಿ ವೈಷ್ಣವ ಮಂತ್ರೋಪದೇಶವನ್ನು ಪಡೆದು ಬಾ" ಎಂದು ಆಜ್ಞಾಪಿಸಿದರು.

ರಾಮಾನುಜರು ಸ್ವಲ್ಪವೂ ತಡಮಾಡದೆ ಗೋಷ್ಠೀಪೂರ್ಣರ ಬಳಿ ಹೋದರು. ಅವರ ಪಾದಾರ್ಚನೆ ಮಾಡಿದರು. ತಮ್ಮ ಇಂಗಿತವನ್ನು ಅವರಲ್ಲಿ ಅರಿಕೆ ಮಾಡಿಕೊಂಡರು.

**ಗೋಷ್ಠೀಪೂರ್ಣರು** "ಬೇರೊಂದು ದಿನ ಬಾ, ನೋಡೋಣ" ಎಂದು ತಿಳಿಸಿದರು.

ರಾಮಾನುಜರು ನಿರಾಶರಾಗಿ ಹಿಂದಿರುಗಿದರು. ಒಂದೆರಡು ದಿನಗಳ ನಂತರ ಗೋಷ್ಠೀಪೂರ್ಣರು ಶ್ರೀರಂಗಕ್ಕೆ ಶ್ರೀರಂಗನಾಥನ ದರ್ಶನಾರ್ಥವಾಗಿ ಬಂದರು.

ಒಬ್ಬ ಅರ್ಚಕ ಗೋಷ್ಠೀಪೂರ್ಣರ ಬಳಿ ಬಂದು "ಸ್ವಾಮಿಯ ಅಪ್ಪಣೆಯಂತೆ ತಾವು ಯೋಗ್ಯರಾದ ಅರ್ಹರಾದ ರಾಮಾನುಜರಿಗೆ ಮಂತ್ರೋಪದೇಶವನ್ನು ಮಾಡಿ ಅರ್ಥವನ್ನು ತಿಳಿಸಬೇಕೆಂದು" ಅರಿಕೆ ಮಾಡಿಕೊಂಡರು.

ಅರ್ಚಕನ ಮಾತನ್ನು ಕೇಳಿ ಗೋಷ್ಠೀಪೂರ್ಣರು ಭಗವಂತನಲ್ಲಿ ಅರಿಕೆ ಮಾಡಿಕೊಂಡರು.

"ಸ್ವಾಮಿ, ನೀನೇ ಈ ನಿಯಮವನ್ನು ಮಾಡಿರುವೆ, ಇದಂ ತೇನಾತಪಸ್ಕಾಯ ನಾಭಕ್ತಾಯ ಕದಾಚನ । ನಚಾಶುಶ್ರೂಷವೇ ವಾಚ್ಯಂ ನಚಮಾಂ ಯೋಽಭ್ಯಸೂಯತಿ ॥ (ಗೀತಾ ಅಧ್ಯಾಯ 18, ಶ್ಲೋಕ 67)

ಯಾರು ತಪಸ್ಸು ಇಲ್ಲವೇ ಭಕ್ತಿಯಿಂದ ದೂರವಿರುತ್ತಾರೆಯೋ, ಯಾರು ಸೇವೆ ಮಾಡುವುದಿಲ್ಲವೋ, ಯಾರು ನನ್ನನ್ನು ನಿಂದಿಸುತ್ತಾರೆಯೋ, ಅವರಿಗೆ ನೀನು ಈ ಮಂತ್ರವನ್ನು ಹೇಳಿಕೊಡಲೇಬಾರದು".

"ಹೇ ಸ್ವಾಮಿ, ಕೆಲಕಾಲವಾದರೂ ತಪಮಾಡದೆ, ಮನಸ್ಸು ಶುದ್ಧಿಯಾಗುವುದಿಲ್ಲ, ಅಶುದ್ಧಮನಸ್ಸಿನವನು ಈ ಮಂತ್ರವನ್ನು ಪಡೆಯಲು ಸಾಧ್ಯವೇ?"

ಸ್ವಾಮಿಯಿಂದ ಉತ್ತರ ಕೇಳಿಬಂದಿತು.

"ಎಲೈ ಪೂರ್ಣನೆ, ನೀನು ರಾಮಾನುಜರ ಶುದ್ಧಮನಸ್ಸನ್ನರಿಯೆ. ಅವನು ಮಾನವ ಕುಲವನ್ನೇ ಉದ್ಧರಿಸಲು ಬಂದಿರುವ ಮಹಾತ್ಮನೆಂದು ನಂತರ ತಿಳಿಯುವುದು"

ರಾಮಾನುಜರು ಪುನಃ ಗೋಷ್ಠೀಪೂರ್ಣರ ಬಳಿ ಹೋದರು. ಪ್ರಯೋಜನವಾಗಲಿಲ್ಲ, ಹೀಗೆ 18 ಬಾರಿ ತಿರಸ್ಕೃತರಾದರು.

ಹೀಗಾಗಿ ರಾಮಾನುಜರು ತಮ್ಮಲ್ಲಿ ಏನೋ ಕೊರತೆ ಇದೆ. ಅದಕ್ಕೇ ಗೋಷ್ಠೀಪೂರ್ಣರು ಮಂತ್ರೋಪದೇಶ ಮಾಡಲಿಲ್ಲವೆಂದು ತಿಳಿದು ಬಹಳವಾಗಿ ಕಣ್ಣೀರಿಟ್ಟರು.

ಅವರ ದುಃಖವನ್ನು ನೋಡಿದ ಕೆಲವರು ಈ ವಿಷಯವನ್ನು ಗೋಷ್ಠೀಪೂರ್ಣರಿಗೆ ತಿಳಿಸಿದರು.

ಆಗ ಗೋಷ್ಠೀಪೂರ್ಣರ ಮನಸ್ಸು ಕರಗಿತು. ರಾಮಾನುಜರನ್ನು ಕರೆಸಿ ಅಷ್ಟಾಕ್ಷರ ಮಂತ್ರವನ್ನು ಉಪದೇಶಿಸಿದರು.

**ಗೋಷ್ಠೀಪೂರ್ಣರು:** "ಇದರ ಮಹತ್ವ ಶ್ರೀಮನ್ನಾರಾಯಣನೊಬ್ಬನಿಗೆ ಗೊತ್ತು. ಈ ಕಲಿಯುಗದಲ್ಲಿ ನಿನ್ನ ಹೊರತು ಮತ್ತಾರೂ ಯೋಗ್ಯರಾದವರು ಸಿಗಲಿಲ್ಲ. ನೀನೇ ಎರಡನೆಯವನು. ಯಾರು ಈ ಮಂತ್ರೋಪದೇಶವನ್ನು ಪಡೆಯುತ್ತಾರೋ ಅವರು ಮರಣದ ನಂತರ ವೈಕುಂಠವನ್ನು ಸೇರುತ್ತಾರೆ. ಈ ಮಂತ್ರವನ್ನು ನೀನು ಮತ್ತಾರಿಗೂ ತಿಳಿಸಕೂಡದು".

ಮಂತ್ರೋಪದೇಶವನ್ನು ಪಡೆದ ರಾಮಾನುಜರ ಮುಖ ದಿವ್ಯತೇಜಸ್ಸಿನಿಂದ ಹೊಳೆಯಿತು. ಅವರು ಹಿಂದಿರುಗುವಾಗ್ಗೆ ವಿಷ್ಣು ದೇವಾಲಯದ ಹೆಬ್ಬಾಗಿಲಿಗೆ ಬಂದರು. ಅಲ್ಲಿ ಅವರು ಘಟ್ಟಿಯಾಗಿ ಕೂಗಿಕೊಂಡರು – "ಎಲ್ಲರೂ ಬನ್ನಿ, ಓಡೋಡಿ ಬನ್ನಿ, ನಿಮ್ಮೆಲ್ಲರಿಗೂ ನಿಮ್ಮ ಸಂಕಟಗಳಿಂದ ದೂರಮಾಡುವ ಅಮೂಲ್ಯ ಆಭರಣವೊಂದನ್ನು ದಾನವಾಗಿ ಕೊಡುತ್ತೇನೆ".

ಅವರ ಮಾತುಗಳನ್ನು ಕೇಳಿಸಿಕೊಂಡ ಜನರೆಲ್ಲರೂ, ಸ್ತ್ರೀ-ಪುರುಷರು, ಮಕ್ಕಳು, ಯುವಕರು, ಯುವತಿಯರು, ಪಂಡಿತ-ಪಾಮರರು, ಅಸ್ಥಳಕ್ಕೆ ಧಾವಿಸಿದರು.

ರಾಮಾನುಜರ ಅಪ್ರಮೇಯ ಸೌಂದರ್ಯ ಹಾಗೂ ಶಾಂತಮುಖವನ್ನು ನೋಡಿ ಬೆರಗಾದರು.

ಜನಸ್ತೋಮವನ್ನು ನೋಡಿದ ರಾಮಾನುಜರ ಆನಂದಸಾಗರ ಉಕ್ಕಿ ಬಂದಿತು. ತಮ್ಮ ಶಿಷ್ಯರಾದ ದಾಶರಥಿ ಮತ್ತು ಕೂರೇಶರೂ ಸಹ ಅಲ್ಲಿಗೆ ಬಂದರು. ಕೂಡಲೇ ಅವರನ್ನು ತಬ್ಬಿಕೊಂಡು ಆನಂದವನ್ನು ಹಂಚಿಕೊಂಡರು.

ಆನಂದಭರಿತರಾದ ರಾಮಾನುಜರು ಕೂಡಲೇ ದೇವಸ್ಥಾನದ ಗೋಪುರದ ತುದಿಯನ್ನೇರಿ, ತುಂಬು ಹೃದಯದಿಂದ ಕೂಗಿ ಹೇಳಿದರು.

"ನನ್ನ ಪ್ರಾಣಕ್ಕಿಂತಲೂ ಮಿಗಲಾದ ಅಣ್ಣತಮ್ಮಂದಿರೇ, ಅಕ್ಕತಂಗಿಯರೇ, ನೀವು ಈ ಪ್ರಪಂಚದ ಕಷ್ಟಕಾರ್ಪಣ್ಯಗಳಿಂದ ಎಂದೆಂದೂ ದೂರವಿರಲು ಬಯಸುವುದಾದರೆ ನೀವೆಲ್ಲರೂ ನನ್ನೊಂದಿಗೆ ಮೂರು ಬಾರಿ ಒಕ್ಕೊರಳಿನಿಂದ ಶ್ರೇಷ್ಠವಾದ ಈ ಮಂತ್ರವನ್ನು ಉಚ್ಚರಿಸಿ, ಇದರಿಂದ ನೀವು ಪುನೀತರಾಗುವಿರಿ".

ಎಲ್ಲರೂ ಆ ಮಂತ್ರವನ್ನು ಉಪದೇಶಿಸಿರೆಂದು ಪ್ರಾರ್ಥಿಸಿಕೊಂಡರು.

ಆಗ ರಾಮಾನುಜರು ಉಚ್ಚಕಂಠದಿಂದ ಕೂಗಿ ಹೇಳಿದರು – **'ಓಂ ನಮೋ ನಾರಾಯಣಾಯ'**.

ಅಲ್ಲಿ ನೆರೆದಿದ್ದ ಜನಸ್ತೋಮ ಮಂತ್ರವನ್ನು ರಾಮಾನುಜರ ಸ್ವರಕ್ಕೆ ಸ್ವರ ಬೆರಸಿ ಜೋರಾಗಿ ಉಚ್ಚರಿಸಿದರು. ಆಮಂತ್ರೋಚ್ಚಾರಣೆಯ ಪ್ರಭಾವದಿಂದ ಎಲ್ಲರೂ ಸ್ತಬ್ಧರಾದರು. ಅವರಿಗೆ ಈ ಭೂಮಿಯೇ ವೈಕುಂಠವಾಗಿ ಕಾಣಿಸಿತು.

ನಂತರ ರಾಮಾನುಜರು ತಮ್ಮ ಶಿಷ್ಯರೊಡಗೂಡಿ ಗೋಷ್ಠೀಪೂರ್ಣರ ಚರಣ ಸೇವೆಗಾಗಿ ಅವರ ಮನೆಗೆ ಬಂದರು.

ವಿಷಯವನ್ನು ತಿಳಿದ ಗೋಷ್ಠೀಪೂರ್ಣರು ಕೆರಳಿ,

**ಕೇದಾರಗೌಳ**

ಕಂದ|| ಪಾಪಿಯೆ ಬಂದೆಯಾ ಮರಳಿ
ಪಾಪಿಯಾದೆನು ನಿನಗಾಮಂತ್ರವನಿತ್ತುನಾಂ ।
ಶಪಿಸುವೆನದರಿಂನಶಿಸಲಿ
ಪಾಪಿ, ನಿನ್ನಯಜ್ಞಾನಂ ಸೇರು ನರಕವಂ ||
ಪಾಪಿ, ನಿನ್ನಂತಹ ಪಿಶಾಚಿಗೆ ಪಾಪವಿಮೋಚನ ಸ್ಥಳವೇ ದೊರಕದಂತಾಗಲಿ

**ರಾಮಾನುಜರು:** ನಿರ್ಭಯರಾಗಿ, ಅತಿವಿನೀತರಾಗಿ, ಗೋಷ್ಠೀಪೂರ್ಣರನ್ನು ಪ್ರಾರ್ಥಿಸಿದರು.

**ರಾಗ-ಖರಹರಪ್ರಿಯ** **ಆದಿತಾಳ**

,ಗುರುವೆ ವಿನಯದೊ । ಳಾಂಪೇಳುವೆ ।
,ಕರುಣಾನಿಧಿಯೇ । ಕರವಾಮುಗಿದು ||ಪ||
,ಪರಮಪಾಪಿ । ಯಾದೆನಾನು ।
,ಗುರುನಿಮ್ಮಾಜ್ಞೆಯ । ಉಲ್ಲಂಘಿಸಿ ||೧||

,ಶ್ರೇಷ್ಠಮಂತ್ರದಿಂ । ಸಹಸ್ರಾರುಜನರ ।
,ಕಷ್ಟಪರಿಹಾರ । ವಾದರೆ ಸಾಕು ||
,ಇಷ್ಟನೆಬಯಸುವೆ । ನಾನು ಸರ್ವದಾ ।
,ಭ್ರಷ್ಟನಾದರು ದುಃಖ । ಎನಗಿಲ್ಲಸ್ವಾಮಿ ||೨||

"ಪೂಜ್ಯರೇ, ತಾವು ಉಪದೇಶಿಸಿದ ಮಂತ್ರದಿಂದ ಅಸಂಖ್ಯ ಜನರು, ಸ್ತ್ರೀ-ಪುರುಷರು ವೈಕುಂಠ ಸೇರುವಲ್ಲಿ ಕ್ಷುಲ್ಲಕ ಪ್ರಾಣಿಯಾದ ನಾನೊಬ್ಬ ನರಕಕ್ಕೆ ಹೋದರೂ ಚಿಂತೆಯಿಲ್ಲ. ಇದಕ್ಕಿಂತಲೂ ಮಿಗಲಾದ ಶ್ರೇಷ್ಠವಾದ ಕರ್ತವ್ಯ ಮತ್ತೊಂದಿಲ್ಲ" ಎಂದರು.

ರಾಮಾನುಜರ ಸೌಜನ್ಯಪೂರ್ಣ ಮಾತುಗಳು ಗೋಷ್ಠೀಪೂರ್ಣರನ್ನು ಬೆರಗುಗೊಳಿಸಿತು. ಅವರ ಕೋಪ ಕ್ಷಣಮಾತ್ರದಲ್ಲಿ ಮಾಯವಾಯ್ತು, ರಾಮಾನುಜರ ಮಹಾಮಹಿಮೆಯನ್ನು, ತಮ್ಮ ಸಂಕೀರ್ಣ ಮನೋಭಾವವನ್ನರಿತ ಅವರು ರಾಮಾನುಜರನ್ನು ಅಪ್ಪಿಕೊಂಡರು, ಅಲ್ಲಿ ನೆರೆದಿದ್ದ ಜನರೆಲ್ಲಾ ಮುಗ್ಧರಾಗಿ ಈ ಪರಿವರ್ತನೆಯನ್ನು ನೋಡಿದರು.

ಗೋಷ್ಠೀಪೂರ್ಣರು ರಾಮಾನುಜರಿಗೆ ಕೈ ಜೋಡಿಸಿ ಪ್ರಾರ್ಥಿಸಿದರು.

**ಗೋಷ್ಠೀಪೂರ್ಣರು:** ಓ ಮಹಾಮಹಿಮ, ಇಂದಿನಿಂದ ನೀವೇ ನನ್ನ ಗುರು. ಇಷ್ಟು ವಿಶಾಲ ಹೃದಯವಿರುವ ನೀವು ಸಾಕ್ಷಾತ್ ವಿಷ್ಣುವಿನ ಅಂಶ. ನಿಮ್ಮ ಮಹತ್ವವನ್ನು ಅರಿಯಲು ನನಗೆ ಸಾಧ್ಯವಿಲ್ಲ. ನನ್ನ ತಪ್ಪನ್ನು ಕ್ಷಮಿಸಿ".

**ರಾಮಾನುಜರು:** (ಗೋಷ್ಠೀಪೂರ್ಣರ ಪಾದಗಳನ್ನು ಹಿಡಿದು) ತಮ್ಮ ಬಾಯಿಂದ ಬಂದ ಆ ಶ್ರೇಷ್ಠ ಮಂತ್ರ ಸಹಸ್ರಾರು ಜನರನ್ನುದ್ಧರಿಸಿತು. ಅದರ ಪ್ರಭಾವದಿಂದ ನಾನು ಗುರು ಆಜ್ಞೆಯನ್ನು ಉಲ್ಲಂಘಿಸಿದ್ದರೂ, ನನ್ನ ಗುರುಗಳಾದ ತಾವೇ ನನ್ನನ್ನು ಆಲಂಗಿಸಿ ಪುನೀತನನ್ನಾಗಿಸಿದಿರಿ. ನನ್ನ ಅತ್ಯಂತ ನಮ್ರ ಪ್ರಾರ್ಥನೆಯೆಂದರೆ ತಮ್ಮ ಪಾದಗಳಲ್ಲಿ ನನಗೆ ಎಂದೆಂದೂ ಆಶ್ರಯ ಕೊಡಬೇಕು".

ರಾಮಾನುಜರ ಈ ಸೌಜನ್ಯಭರಿತ ನುಡಿಗಳನ್ನು ಕೇಳಿ ಗೋಷ್ಠೀಪೂರ್ಣರು ತಮ್ಮ ಮಗ ಸೌಮ್ಯನಾರಾಯಣನನ್ನು ರಾಮಾನುಜರ ಶಿಷ್ಯನನ್ನಾಗಿ ಸ್ವೀಕರಿಸುವಂತೆ ಕೇಳಿಕೊಂಡರು.

ನಂತರ ರಾಮಾನುಜರು ತಮ್ಮ ಶಿಷ್ಯರೊಡಗೂಡಿ ಅಲ್ಲಿಂದ ಶ್ರೀರಂಗಕ್ಕೆ ತೆರಳಿದರು.

ಈ ಘಟನೆಯ ನಂತರ ಜನರು ರಾಮಾನುಜರನ್ನು ಲಕ್ಷ್ಮಣಸ್ವಾಮಿಯ ಅವತಾರವೆಂದೇ ಭಾವಿಸಿ ಭಕ್ತಿಪೂರ್ವಕವಾಗಿ ಗೌರವಿಸ ತೊಡಗಿದರು.

— ❋ —

# 15

# ರಾಮಾನುಜರಿಂದ ಶಿಷ್ಯರಿಗೆ ಶಿಕ್ಷಣ
# ಮತ್ತು
# ಗುರುಗಳಿಂದ ರಾಮಾನುಜರಿಗೆ ಶಿಕ್ಷಣ

ರಾಮಾನುಜರು ಶಿಷ್ಯರೊಡಗೂಡಿ ಶ್ರೀರಂಗದ ಮಠ ಸೇರಿದರು.

ಒಂದು ದಿನ ಕೂರೇಶರು ರಾಮಾನುಜರಲ್ಲಿ ಪ್ರಾರ್ಥಿಸಿಕೊಂಡರು – ಈ ಶ್ಲೋಕದ ಗೂಢಾರ್ಥವೇನೆಂದು:

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ ।**
**ಅಹಂತ್ವಾಂ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ ॥**

ಎಲ್ಲ ಧರ್ಮಗಳನ್ನು ತ್ಯಜಿಸಿ ನನ್ನಲ್ಲಿಯೇ ಶರಣು ಹೋಗು, ನಾನು ನಿನ್ನನ್ನು ಎಲ್ಲ ಪಾಪಗಳಿಂದ ಮುಕ್ತನನ್ನಾಗಿಸುತ್ತೇನೆ. ಚಿಂತಿಸಬೇಡ.

**ರಾಮಾನುಜರು:** ನನ್ನ ಗುರುಗಳು ಗೋಷ್ಠೀಪೂರ್ಣರು ಅಪ್ಪಣೆ ಕೊಡಿಸಿದ್ದಾರೆ "ಯಾರು ಅಹಂಕಾರವನ್ನು ತ್ಯಜಿಸಿ, ಪಾವಿತ್ರತೆಯನ್ನು ಪಡೆದು ಗುರುಗಳ ಸೇವೆಯನ್ನು ಒಂದು ವರ್ಷ ಮಾಡುತ್ತಾರೋ ಅಂತಹವರಿಗೆ ಮಾತ್ರ ಈ ಶ್ಲೋಕದ ಗೂಢಾರ್ಥವನ್ನು ಹೇಳಬಹುದು. ಆದ್ದರಿಂದ ನೀನು ಈ ರೀತಿ ನಡೆದುಕೊಂಡರೆ ಈ ಶ್ಲೋಕದ ವಿವರಣೆಯನ್ನು ಕೊಡುತ್ತೇನೆ.

**ಕೂರೇಶರು:** ಗುರುವರ್ಯಾ, ನಾನು ಒಂದು ವರ್ಷ ಜೀವಂತನಾಗಿ ಇದ್ದೇ ಇರುತ್ತೇನೆಂಬ ನಂಬಿಕೆ ಎಲ್ಲಿದೆ? ಅಂದ ಮೇಲೆ ತಾವು ಈಗಲೇ ಅದರ ಅರ್ಥವನ್ನು ತಿಳಿಯಲು ನನ್ನನ್ನು ಯೋಗ್ಯನನ್ನಾಗಿ ಮಾಡಿ.

**ಯತಿರಾಜರು:** ಹೋಗಲಿ ಒಂದು ತಿಂಗಳಾದರೂ ಉಪವಾಸ ಮಾಡು, ಇಲ್ಲವೇ ಭಿಕ್ಷೆಮಾಡು.

ಕೂರೇಶರು ಗುರುಗಳಾಜ್ಞೆಯಂತೆ ಒಂದು ತಿಂಗಳು ಭಿಕ್ಷಾಟನೆ ಮಾಡಿ, ಅವರಿಂದ ಶ್ಲೋಕದ ವಿವರಣೆಯನ್ನು ಪಡೆದರು.

ದಾಶರಥಿಯೂ ರಾಮಾನುಜರ ಮೂಲಕವೇ ಆಶ್ಲೋಕದ ವಿವರಣೆ ಪಡೆಯಲು ಬಯಸಿದನು. ಆದರೆ ರಾಮಾನುಜರು ಹೇಳಿದರು – "ನೀನು ನನ್ನ ಬಂಧುವಾದ ಕಾರಣ ಗೋಷ್ಠೀಪೂರ್ಣರ ಬಳಿಗೆ ಹೋಗು". ಅಲ್ಲದೆ ದಾಶರಥಿಗೆ ತನ್ನ ಪಾಂಡಿತ್ಯದ ಮೇಲೆ ಗರ್ವವಿತ್ತು,

ಗೋಷ್ಠೀಪೂರ್ಣರಲ್ಲಿ ದಾಶರಥಿ ಆರು ತಿಂಗಳು ಸೇವೆ ಸಲ್ಲಿಸಿದ, ಆದರೂ ಆತನು ಗರ್ವಿಷ್ಠನೆಂದು ತಿಳಿದು ಪುನಃ ಅತನನ್ನು ಯತಿರಾಜರ ಬಳಿಯೇ ಕಳುಹಿದರು.

ಅದೇ ಸಮಯಕ್ಕೆ **ಅತ್ತುಲ್ಯೆ** ಮಹಾಪೂರ್ಣರ ಮಗಳು ಯತಿರಾಜರ ಬಳಿ ಬಂದು ತಿಳಿಸಿದಳು.

"ಪ್ರಿಯ ಸೋದರರೇ, ನನ್ನ ಮಾವನ ಮನೆಯಲ್ಲಿ ನಿತ್ಯವೂ ಅಡಿಗೆಗೆ ಬೇಕಾಗುವಷ್ಟು ನೀರನ್ನು ನಾನು ಬಹಳ ದೂರದಿಂದ ಬೆಳಗ್ಗೆ ಹಾಗೂ ಸಂಜೆ ಹೊತ್ತು ತರಬೇಕಾಗಿದ್ದಿತು. ಅದು ನಿರ್ಜನದಾರಿ. ಈ ಕೆಲಸ ಸಾಧ್ಯವಾಗುವುದಿಲ್ಲವೆಂದು ಅತ್ತೆಯವರಿಗೆ ತಿಳಿಸಿದೆ. ಅದಕ್ಕೆ ಅವರು ಒಬ್ಬ ಅಡಿಗೆಯವನನ್ನು ಕೆಲಸಕ್ಕೆ ನೇಮಿಸಿಕೋ ಎಂದು ಕೋಪದಿಂದ ಹೇಳಿದರು. ನಾನು ಗತ್ಯಂತರವಿಲ್ಲದೆ ನನ್ನ ತಂದೆಯ ಬಳಿಬಂದೆ, ಅವರು ನಿಮ್ಮ ಬಳಿ ಕಳುಹಿಸಿಕೊಟ್ಟರು.

**ರಾಮಾನುಜರು:** ತಂಗೀ, ನೀನು ದುಃಖಿಸಬೇಡ. ನಾನು ನಿನ್ನೊಂದಿಗೆ ಒಬ್ಬ ಬ್ರಾಹ್ಮಣನನ್ನು ಕಳುಹಿಸಿ ಕೊಡುತ್ತೇನೆ. ಆತನು ನೀರು, ಅಡಿಗೆ, ಎಲ್ಲಾ ಕೆಲಸವನ್ನು ನೋಡಿಕೊಳ್ಳುತ್ತಾನೆ". ಹೀಗೆಂದು ಹೇಳಿ, ರಾಮಾನುಜರು ದಾಶರಥಿಯ ಕಡೆ ನೋಡಿದರು".

ದಾಶರಥಿ ಗುರುಗಳ ಅಪೇಕ್ಷೆಯಂತೆ ಅತ್ತುಲ್ಳೈ ಜೊತೆಯಲ್ಲಿ ಆಕೆಯ ಮಾವನ ಮನೆಗೆ ಹೋದನು. ಅಲ್ಲಿ ಬಹಳ ಚೆನ್ನಾಗಿ ಅಡಿಗೆ ಮನೆಯ ಕೆಲಸ ಕಾರ್ಯಗಳನ್ನು ನಿರ್ವಹಿಸಿದನು. ಆರು ತಿಂಗಳು ಕಳೆದವು.

ಒಂದು ದಿನ ಒಬ್ಬ ವೈಷ್ಣವ, ಧರ್ಮಗ್ರಂಥದ ಒಂದು ಶ್ಲೋಕದ ಮೇಲೆ ವ್ಯಾಖ್ಯಾನ ಮಾಡುತ್ತಿದ್ದ. ಸಭಿಕರೆಲ್ಲರೂ ಸಂತೋಷದಿಂದ ಕೇಳುತ್ತಿದ್ದರು. ದಾಶರಥಿಯೂ ಸಹ ಆ ಸಭೆಯಲ್ಲಿದ್ದ, ಆತನಿಗೆ ವ್ಯಾಖ್ಯಾನಕಾರರ ಅಭಿಪ್ರಾಯ ತಪ್ಪಾಗಿಕಂಡಿತು. ಅದಕ್ಕೆ ಅವನು ವಿರೋಧಿಸಿ, ತನ್ನ ವ್ಯಾಖ್ಯಾನವನ್ನು ಕೊಟ್ಟನು.

**ವ್ಯಾಖ್ಯಾನಕಾರ:** ನಿಲ್ಲಿಸು, ಮೂರ್ಖನೆ, ನರಿ ಎಲ್ಲಿ, ಸ್ವರ್ಗವೆಲ್ಲಿ. ಒಬ್ಬ ಅಡಿಗೆಭಟ್ಟ, ಧರ್ಮಗ್ರಂಥದ ಮೇಲೆ ವ್ಯಾಖ್ಯಾನ.

ವಿಶಾಲ ಹೃದಯವುಳ್ಳ ದಾಶರಥಿ ಪ್ರತಿ ಮಾತಾಡದೆ ಹೊರಟು ಹೋದನು.

ಆದರೆ ದಾಶರಥಿಯ ವ್ಯಾಖ್ಯಾನ ಆ ವೈಷ್ಣವನ ವ್ಯಾಖ್ಯಾನಕ್ಕಿಂತ ಸುಂದರವಾಗಿ ಕಂಡಿತು. ಎಲ್ಲರೂ ಮೆಚ್ಚಿಕೊಂಡರು. ಇದನ್ನು ಕಂಡ ಆ ವೈಷ್ಣವನಿಗೂ ದಾಶರಥಿಯ ವ್ಯಾಖ್ಯಾನ ಶುದ್ಧವೆನಿಸಿತು. ಆಗ ಅವನೂ ಸಹ ದಾಶರಥಿಯ ಪಾದಗಳಿಗೆರಗಿ ಕ್ಷಮೆ ಬೇಡಿದನು.

ಆ ವೈಷ್ಣವನು ದಾಶರಥಿಯನ್ನು ಪ್ರಶ್ನಿಸಲಾಗಿ, ದಾಶರಥಿ ತನ್ನ ಪೂರ್ಣಪರಿಚಯವನ್ನು ತಿಳಿಸಿದ.

ಆಗ ಅಲ್ಲಿಂದ ಕೆಲವರು ಶ್ರೀರಂಗಕ್ಕೆ ಬಂದು ಯತಿರಾಜರಲ್ಲಿ ಅರಿಕೆ ಮಾಡಿಕೊಂಡರು "ಓಮಹಾತ್ಮರೇ, ದಾಶರಥಿಯವರಂತಹ ಪೂರ್ಣಪಂಡಿತರಿಗೆ, ಅಹಂಕಾರ ರಹಿತರಿಗೆ ಇಂತಹ ಶಿಕ್ಷೆಯೇ, ತಾವು ಒಪ್ಪುವುದಾದರೆ ಅವರನ್ನು ಹಿಂದಕ್ಕೆ ಕರೆತರುತ್ತೇವೆ".

ರಾಮಾನುಜರು ಅವರ ಪ್ರೀತಿಯ ಮಾತುಗಳನ್ನು ಕೇಳಿ ತಾವೇ ಅವರೊಂದಿಗೆ ಹೋಗಿ ದಾಶರಥಿಯನ್ನು ಶ್ರೀರಂಗಕ್ಕೆ ಕರೆತಂದರು. ಆತನಿಗೆ ಆಶ್ಲೋಕದ ಗೂಢಾರ್ಥವನ್ನು ತಿಳಿಸಿದರು. ಹೀಗೆ ದಾಶರಥಿಯವರು ವೈಷ್ಣವರ ಸೇವೆ ಮಾಡಿ '**ವಿಷ್ಣುದಾಸ**'ರೆಂಬ ಹೆಸರಿನಿಂದ ಪ್ರಖ್ಯಾತರಾದರು.

ಇದಾದ ನಂತರ ರಾಮಾನುಜರು ಮಹಾಪೂರ್ಣರ ಆಣತಿಯಂತೆ ವರರಂಗರಲ್ಲಿ ಪುನಃ ತಮಿಳು ಪ್ರಬಂಧಗಳ ಅಭ್ಯಾಸ ಮಾಡಿದರು.

ಆ ವೇಳೆಗೆ ಗೋಷ್ಠೀಪೂರ್ಣರು ಯಾಮುನ ಮುನಿಗಳ ಶಿಷ್ಯರಾದ**ಮಾಲಾಧರರ**ನ್ನು ರಾಮಾನುಜರ ಬಳಿ ಕರೆತಂದರು. ಮಾಲಾಧರರು ಶಠಾರಿಸೂಕ್ತಿಯನ್ನು ಚೆನ್ನಾಗಿ ತಿಳಿದಿದ್ದರು. ಆದ್ದರಿಂದ ಗೋಷ್ಠೀಪೂರ್ಣರು ರಾಮಾನುಜರಿಗೆ ತಿಳಿಸಿದರು – "ನೀವು ಮಾಲಾಧರರ ಬಳಿ ಶಠಾರಿ ಸೂಕ್ತಿಯನ್ನು ಅಭ್ಯಾಸ ಮಾಡಿ".

ಒಮ್ಮೆ ಮಾಲಾಧರರು ಮಾಡಿದ ಒಂದು ವ್ಯಾಖ್ಯಾನ ರಾಮಾನುಜರಿಗೆ ಸರಿದೋರಲಿಲ್ಲ. ಆಗ ಅವರೇ ಹೊಸ ರೀತಿಯ ವ್ಯಾಖ್ಯಾನ ಮಾಡಿದರು. ಇದು ಮಾಲಾಧರರಿಗೆ ಸರಿ ತೋರಲಿಲ್ಲ. ಅದನ್ನು ಗುರುಗಳಿಗೆ ಶಿಷ್ಯನು ತೋರಿದ ಅಸಭ್ಯತೆ ಎಂದು ತಿಳಿದು ತಮ್ಮ ಮನೆಗೆ ಹೊರಟು ಹೋದರು.

ಗೋಷ್ಠೀಪೂರ್ಣರಿಗೆ ಮಾಲಾಧರರು ಬಿಟ್ಟು ಹೋದ ವಿಷಯ ತಿಳಿಯಿತು. ಆಗ ಪುನಃ ಮಾಲಾಧರರಲ್ಲಿಗೆ ಹೋಗಿ ಪ್ರಶ್ನಿಸಿದರು – "ರಾಮಾನುಜರು ಶಠಾರಿ ಸೂಕ್ತಿಯ ಸಾವಿರ ಹಾಡುಗಳನ್ನು ಮನನ ಮಾಡಿಕೊಂಡರೇ?".

ಮಾಲಾಧರರು ನಡೆದ ಸಂಗತಿಯನ್ನು ಗೋಷ್ಠೀಪೂರ್ಣರಿಗೆ ತಿಳಿಸಿದರು.

ಆಗ ಗೋಷ್ಠೀಪೂರ್ಣರು ಮಾಲಾಧರರಿಗೆ ತಿಳಿಸಿದರು – "ರಾಮಾನುಜರು ಸಾಮಾನ್ಯರಲ್ಲ, ಶ್ರೀರಾಮಚಂದ್ರನ ತಮ್ಮ ಲಕ್ಷ್ಮಣನೇ ಈ ಜೀವಾತ್ಮರುದ್ಧಾರಕ್ಕಾಗಿ ರಾಮಾನುಜರಾಗಿ ಅವತರಿಸಿದ್ದಾನೆ. ಅಲ್ಲದೆ ರಾಮಾನುಜರ ಬಾಯಿಯಿಂದ ಏನೇ ಬರಲಿ, ಅದು ಯಾಮುನಾಚಾರ್ಯರ ವಾಣಿಯೇ ಹೊರತು ಬೇರೆ ಅಲ್ಲ. ಆದ್ದರಿಂದ ಪುನಃ ಅವರಲ್ಲಿಗೆ ಹೋಗಿ ನೀವು ಆ ಶಠಾರಿ ಸೂಕ್ತಿಯನ್ನು ಪೂರ್ಣಮಾಡಿ".

ಮಾಲಾಧರರು ಗೋಷ್ಠೀಪೂರ್ಣರ ಮಾತಿನಂತೆ ಪುನಃ ರಾಮಾನುಜರಿಗೆ ಆ ಸೂಕ್ತಿಯನ್ನು ಪೂರ್ಣವಾಗಿ ಬೋಧಿಸಲು ಹೊರಟರು.

ಮತ್ತೊಮ್ಮೆ ರಾಮಾನುಜರು ಪುನಃ ಮತ್ತೊಂದು ಸೂಕ್ತಿಯ ಅಭಿಪ್ರಾಯವನ್ನು ತಮ್ಮ ಮಾತುಗಳಲ್ಲಿ ತಿಳಿಸಿದರು. ಆಗ ಮಾಲಾಧರರಿಗೆ ರಾಮಾನುಜರು ದಿವ್ಯ ಜ್ಞಾನಿಗಳೆಂಬುದು ಅರ್ಥವಾಯಿತು. ಕೂಡಲೇ ಅವರು ಬಹಳ ಸಂತೋಷದಿಂದ ರಾಮಾನುಜರ ಸುತ್ತ ಪ್ರದಕ್ಷಿಣೆ ಹಾಕಿ, ಅವರ ಚರಣಗಳಿಗೆ ನಮಸ್ಕರಿಸಿದರು. ಮತ್ತೆ ತಮ್ಮ ಮಗನನ್ನು ಅವರ ಶಿಷ್ಯನನ್ನಾಗಿಸಿದರು.

ನಂತರ ಯತಿರಾಜರು ಶ್ರೀವರರಂಗರಿಂದ ಧರ್ಮದ ರಹಸ್ಯಗಳನ್ನು ತಿಳಿಯಬೇಕೆಂದು ಅವರ ಶರಣು ಹೋದರು.

ವರರಂಗರು ಶ್ರೀರಂಗನಾಥನ ಮುಂದೆ ಹಾಡಿ ಹಾಡಿ ದಣಿದರೆ ಅವರ ಆಯಾಸವನ್ನು ದೂರಮಾಡಲು ರಾಮಾನುಜರು ಅವರ ಪಾದಗಳನ್ನು ಒತ್ತುತ್ತಿದ್ದರು, ಶರೀರಕ್ಕೆ ಅರಿಸಿನ ಹಚ್ಚುತ್ತಿದ್ದರು, ರಾತ್ರಿ ವೇಳೆ ಹಾಲನ್ನು ಕಾಯಿಸಿ ಕೋವಾ ತಯಾರಿಸಿ ಅವರಿಗೆ ಊಟ ಬಡಿಸುತ್ತಿದ್ದರು.

ಇಷ್ಟೆಲ್ಲಾ ಸೇವೆ ಮಾಡುವುದನ್ನು ಗಮನಿಸಿ, ಒಂದು ದಿನ ಶ್ರೀವರರಂಗರು ರಾಮಾನುಜರಿಗೆ ತಿಳಿಸಿದರು. "ಮಗು, ನನ್ನನ್ನು ಇಷ್ಟು ಭಕ್ತಿಯಿಂದ ಸೇವಿಸಿ, ನನ್ನಲ್ಲಿರುವುದನ್ನೆಲ್ಲಾ ತೆಗೆದುಕೊಳ್ಳುವ ಮನಸ್ಸು ಮಾಡಿರುವೆ. ಈದಿನ ನಾನು ಸಂತೃಪ್ತನಾಗಿದ್ದೇನೆ. ಬಾ, ನಿನಗೆ ನನ್ನ ಅಂತರಂಗದ ಗುಟ್ಟನ್ನು ತಿಳಿಸುತ್ತೇನೆ" ಎಂದು ಹತ್ತಿರ ಕರೆದರು.

ಗುರುರೇವ ಪರಂಬ್ರಹ್ಮ ಗುರುರೇವ ಪರಂಧನಂ ।
ಗುರುರೇವ ಪರಃಕಾಮೋ । ಗುರುರೇವ ಪರಾಯಣಂ ॥
ಗುರುರೇವಪರಾ ವಿದ್ಯಾಗುರುರೇವ ಪರಾಗತಿಃ ।
ಯಸ್ಮಾತ್ ತದುಪದೇಷ್ಟಾಸೌತಸ್ಮಾದ್ಗುರುತರೋಗುರುಃ ॥
ಉಪಾಯ ಶ್ಚಾಪ್ಯುಪೇಯಶ್ಚ ಗುರುರೇವೇತಿಭಾವಯ ।

**ರಾಗ-ಹಿಂದೋಳ** **ಆದಿತಾಳ**

,ಗುರುವೇನಮ್ಮಯ । ಪರಬ್ರಹ್ಮವು ।
,ಗುರುವೇನಮ್ಮಯ । ಪರಧನವು ॥ಪ॥
,ಗುರುವೇನಮ್ಮಯ । ಪರಮಅಭೀಷ್ಟವು ।
,ಗುರುವೇನಮ್ಮಯ । ಆಶ್ರಯತ್ರಾಣವು ॥೧॥

,ಗುರುವೇನಮ್ಮಯ । ಬ್ರಹ್ಮಜ್ಞಾನವು ।
,ಗುರುವೇನಮ್ಮಯ । ಪರಮಗತಿಯು ॥
,ಗುರುವಿಗೆ ಸರಿಸಮರು । ಅನ್ಯರಿಲ್ಲವೊ ।
,ಗುರು, ಮಾರ್ಗದರ್ಶಕರು । ದೇವರು ಅವರೇ ॥೨॥

ಈ ಗುಪ್ತ ಸತ್ಯದರಿವಾದ ಮೇಲೆ ರಾಮಾನುಜರು ತಾವು ಧನ್ಯರೆಂದು ಭಾವಿಸಿದರು. ಹೀಗೆ ತಮ್ಮ ದೈವಿಕ ಆಶೆಗಳೆಲ್ಲಾ ಪೂರ್ಣಗೊಂಡ ಮೇಲೆ ಪೂರ್ಣಾನಂದದಲ್ಲಿ ಮುಳುಗಿದರು. **ಗದ್ಯತ್ರಯ**ವನ್ನು ರಚಿಸಿದರು.

ಅಲ್ಲಿಂದ ಮುಂದೆ ಜನರೆಲ್ಲರೂ ಇವರನ್ನು ಸ್ವಾಮಿ ರಂಗನಾಥನೆಂದೇ ಭಾವಿಸಿ ಪೂಜಿಸಿದರು.

ಶ್ರೀವರರಂಗರ ತಮ್ಮ ಚೊಟ್ಟೈನಂಬಿ ಇವರ ಶಿಷ್ಯನಾದನು.

ಯಾಮುನ ಮುನಿಗಳ ಐವರು ಶಿಷ್ಯರಾದ ಕಾಂಚೀಪೂರ್ಣರು, ಮಹಾಪೂರ್ಣರು, ಗೋಷ್ಠಿಪೂರ್ಣರು, ಮಾಲಾಧರರು ಮತ್ತು ಶ್ರೀವರರಂಗರಿಂದ ಎಲ್ಲಾ ಶಾಸ್ತ್ರಗಳ ಶಿಕ್ಷಣ ಪಡೆದು ಯಾಮುನರ ಐದು ಭಾಗಗಳಾದ, ಐದು ಜನ ಶಿಷ್ಯರಲ್ಲಿ ಹಂಚಿ ಹೋಗಿದ್ದ ಪಂಚವಿದ್ಯೆಗಳು ರಾಮಾನುಜರಲ್ಲಿ ಒಟ್ಟು ಗೂಡಿ, ಅಪ್ರಮೇಯ, ಅಪೌರುಷೇಯ ಶಕ್ತಿಗಳಾಗಿ ಬೆಳಗಿದವು.

ಯತಿರಾಜರು ದೇವರನ್ನು ಮುಖಾಮುಖಿ ಕಾಣುವ ಶಕ್ತಿಯನ್ನು ಹಾಗೂ ಪ್ರತ್ಯಕ್ಷವಾಗಿ ಮಾತನಾಡುವ ಅದ್ಭುತ ಶಕ್ತಿಯನ್ನು ಗಳಿಸಿದ್ದರು.

ಸಂತಪ್ತ ಜೀವಿಗಳನ್ನು ಭಗವಂತನ ಪಾದಗಳಲ್ಲಿ ಅರ್ಪಿಸಿ ಅವರ ದುಗುಡವನ್ನು ತೊಡೆದು ಹಾಕುತ್ತಿದ್ದರು. ಆದ್ದರಿಂದ ಅವರನ್ನು **ಉಭಯ ವಿಭೂತಿಪತಿ**ಯೆಂದು ಕರೆದರು. ಅಂದರೆ ಸ್ವಾಮಿರಂಗನಾಥನೇ, ಇವರನ್ನು **ಲೀಲಾವಿಭೂತಿ** ಹಾಗೂ **ನಿತ್ಯವಿಭೂತಿ**ಯನ್ನಾಗಿ ಅಂದರೆ ಇಹ-ಪರ ಎರಡಕ್ಕೂ ಒಡೆಯರನ್ನಾಗಿ ಮಾಡಿದನು.



# 16

# ಶ್ರೀ ರಂಗನಾಥಸ್ವಾಮಿಯ ಪ್ರಧಾನ ಅರ್ಚಕರು

ಶ್ರೀರಂಗದಲ್ಲಿರುವ ಶ್ರೀ ರಂಗನಾಥಸ್ವಾಮಿಯ ದೇವಸ್ಥಾನ ದಕ್ಷಿಣ ಭಾರತದಲ್ಲೇ ಬೃಹದ್ದೇವಸ್ಥಾನ. ಅದರಲ್ಲಿರುವ ಸಾವಿರ ಕಂಬಗಳ ಹಜಾರ ಹಿಂದೆ ಫ್ರೆಂಚರ ಸೈನ್ಯಕ್ಕೆ ನೆಲೆಯಾಗಿತ್ತೆಂದು ಹೇಳುತ್ತಾರೆ.

ರಾಮಾನುಜರ ಕಾಲದಲ್ಲಿ ಈ ದೇವಸ್ಥಾನದಲ್ಲಿ ಒಬ್ಬರು ಪ್ರಧಾನ ಅರ್ಚಕರು ಮತ್ತು ಅನೇಕ ಮಂದಿ ಸಹಾಯಕ ಅರ್ಚಕರಿರುತ್ತಿದ್ದರು. ಇವರಲ್ಲಿ ಕೆಲವರು ಹಣಗಳಿಸುವ ದುರಾಶೆಯುಳ್ಳವರು ಮತ್ತೆ ಕೆಲವರು ಸಾತ್ವಿಕರು, ಯಾವಾಗಲೂ ಸ್ವಾಮಿಯ ಸೇವೆಯಲ್ಲೇ ನಿರತರಾಗಿರುವ ಭಗವದ್ಭಕ್ತರಾಗಿದ್ದರು.

ರಾಮಾನುಜರ ಕಾಲದಲ್ಲಿದ್ದ ಪ್ರಧಾನ ಅರ್ಚಕ ದೈವಭಕ್ತನಾಗಿರಲಿಲ್ಲ, ಹಣದ ಪಿಶಾಚಿ. ತನ್ನ ಧನಾರ್ಜನೆಗೆ ಅಡ್ಡಿಮಾಡುವವರನ್ನು ಯಾವುದೋ ನೆಪದಿಂದ ಓಡಿಸಿ ಬಿಡುತ್ತಿದ್ದನು.

ರಾಮಾನುಜರನ್ನೇ ಶ್ರೀರಂಗನಾಥನೆಂದು ಭಾವಿಸಿದ್ದ ಅಂದಿನ ಭಕ್ತಸ್ತೋಮ ಅವರಿಗಾಗಿ ಬೇಕಾದಷ್ಟು ಹಣ ಖರ್ಚುಮಾಡಲು ಸಿದ್ಧವಿದ್ದಿತು. ಹೀಗಾಗಿ ಜನರು ಪ್ರಧಾನ ಅರ್ಚಕನ ಬಗ್ಗೆ ತಾತ್ಸಾರ ತೋರಿದರು. ಇದು ಆತನಿಗೆ ಸರಿದೋರಲಿಲ್ಲ. ಆಗ ಆತನು ತನ್ನ ದುಡಿಮೆಗೆ ಅಡ್ಡಿಯಾಗಿರುವ ರಾಮಾನುಜರನ್ನು ಏನಾದರೂ ಮಾಡಿ ಕೊನೆಗೊಳಿಸಬೇಕು ಎಂದು ದುರಾಲೋಚಿಸಿದನು.

ಒಂದು ದಿನ ರಾಮಾನುಜರನ್ನು ತನ್ನ ಮನೆಗೆ ಭಿಕ್ಷೆಗೆ ಬರಬೇಕೆಂದು ಬೇಡಿಕೊಂಡನು. ರಾಮಾನುಜರು ಒಪ್ಪಿಗೆ ಕೊಟ್ಟರು.

ಅರ್ಚಕನು ಮನೆಯಲ್ಲಿ ತನ್ನ ಹೆಂಡತಿಗೆ ತಿಳಿಸಿದನು – "ರಾಮಾನುಜರನ್ನು ಭಿಕ್ಷೆಗೆ ಕರೆದಿದ್ದೇನೆ. ನೀನು ಅವರಿಗೆ ವಿಷಪಾನ ಮಾಡಿಸಬೇಕು".

ರಾಮಾನುಜರು ಅರ್ಚಕನ ಮನೆಗೆ ಬಂದರು. ಸಂಪ್ರದಾಯದಂತೆ ಅವರ ಪಾದಗಳನ್ನು ತೊಳೆಯುವಾಗ ಅವರ ದೋಷರಹಿತ ಮುಖ, ದೈವೀಸಂಪನ್ನ ಸೌಂದರ್ಯವನ್ನು ನೋಡಿ ಅರ್ಚಕನ ಹೆಂಡತಿಯಲ್ಲಿ ತಾಯಿ ವಾತ್ಸಲ್ಯ ಮೂಡಿತು.

**ಅರ್ಚಕರಪತ್ನಿ:** "ಮಗು, ಈನನ್ನ ಭಿಕ್ಷೆ ಸ್ವೀಕರಿಸಬೇಡ. ಇದರಲ್ಲಿ ವಿಷ ಬೆರೆಸಿದ್ದೇನೆ. ನೀನು ಎಲ್ಲಿಯಾದರೂ ಬೇರೆ ಸ್ಥಳಕ್ಕೆ ಹೊರಟುಹೋಗು".

.ರಾಮಾನುಜರು ಆಶ್ಚರ್ಯಚಕಿತರಾದರು, ದಿಕ್ಕು ಕಾಣದೇ ಕುಳಿತರು "ನಾನು ಈ ಅರ್ಚಕರಿಗೆ ಏನು ಅಪರಾಧ ಮಾಡಿದ್ದೇನೆ? ನನಗೆ ಈ ಮರಣದಂಡನೆ ಏಕೆ?" ಏನೂ ಹೊಳೆಯದೆ ಅವರು ಅರ್ಚಕರ ಮನೆಯಿಂದ ಹೊರಟು ಕಾವೇರೀ ನದಿಯ ದಂಡೆಯ ಮೇಲೆ ಹೋಗಿ ಕುಳಿತರು. ಕಾದಮರಳು. ಇದೂ ಸಹ ಅವರ ಗಮನಕ್ಕೆ ಬರಲಿಲ್ಲ. ಅದೇ ಸಮಯಕ್ಕೆ ಗೋಷ್ಠೀಪೂರ್ಣರು ಅಲ್ಲಿಗೆ ಬಂದರು. ಅವರ ಪಾದಗಳನ್ನು ಹಿಡಿದು ಆ ಕಾದ ಮರಳಿನ ಮೇಲೆ ಒದ್ದಾಡುತ್ತಾ ಅಳತೊಡಗಿದರು.

ಗೋಷ್ಠೀಪೂರ್ಣರು ರಾಮಾನುಜರನ್ನು ಮೇಲೆತ್ತಿ ದುಃಖಕ್ಕೆ ಕಾರಣವೇನೆಂದು ಕೇಳಿದರು.

**ರಾಮಾನುಜರು:** ಗುರುಗಳೇ, ಅರ್ಚಕರ ದುರಾಲೋಚನೆಗಾಗಿ ಅಳುತ್ತಿದ್ದೇನೆ. ಅವರು ಈ ಪಾಪದಿಂದ ಮುಕ್ತರಾಗುವುದೆಂತು?

ಗೋಷ್ಠೀಪೂರ್ಣರು ಎಲ್ಲ ವಿಚಾರವನ್ನು ತಿಳಿದ ಮೇಲೆ ಹೀಗೆ ಹೇಳಿದರು.

**ಗೋಷ್ಠೀಪೂರ್ಣರು:** "ನೀನು ಚಿಂತಿಸಬೇಡ. ನಿನ್ನ ಮನದಲ್ಲಿ ಅರ್ಚಕನನ್ನು ಪಾಪವಿಮುಕ್ತನನ್ನಾಗಿಸಬೇಕೆಂಬ ಸಂಕಲ್ಪ ಬರುತ್ತಲೇ, ಅವನ ಪಾಪ ಪರಿಹಾರವಾಗಿದೆ. ಆತನು ಆದಷ್ಟುಬೇಗ ತನ್ನ ಕ್ರೂರ ಮಾರ್ಗವನ್ನು ಬಿಟ್ಟು ಧರ್ಮಿಷ್ಠನಾಗುತ್ತಾನೆಂದು ತಿಳಿಸಿ, ಅವರನ್ನು ಸಮಾಧಾನಪಡಿಸಿದರು".

ಅಲ್ಲಿಂದ ರಾಮಾನುಜರು ಮಠವನ್ನು ಸೇರಿದರು. ಬ್ರಾಹ್ಮಣನೊಬ್ಬನು ಅವರನ್ನೇ ಕಾಯುತ್ತಿದ್ದನು. ಆತನು ಭಕ್ತಿಯಿಂದ ಅವರ ಪಾದಕ್ಕೆರೆಗಿ ತಂದಿದ್ದ ಹಣ್ಣುಗಳನ್ನು ಅವರ ಪಾದಗಳಿಗೆ ಅರ್ಪಿಸಿದನು.

ರಾಮಾನುಜರು ಸಂತೋಷದಿಂದ ಹಣ್ಣಿನಲ್ಲಿ ಸ್ವಲ್ಪ ತಾವೂ ತೆಗೆದುಕೊಂಡು ಉಳಿದ ಹಣ್ಣುಗಳನ್ನು ಎಲ್ಲರಿಗೂ ಹಂಚಿದರು.

ಅವರು ಈ ಘಟನೆಯನ್ನು ಯಾರಿಗೂ ತಿಳಿಸಲಿಲ್ಲ. ಆದರೆ ಮನದಲ್ಲೇ ಅರ್ಚಕನಿಗಾಗಿ ಚಿಂತಿಸುತ್ತಿದ್ದರು.

ಇತ್ತ ಕಡೆ ಅರ್ಚಕನು ತನ್ನ ಹೆಂಡತಿಯನ್ನು ವಿಚಾರಿಸಲಾಗಿ, ಆತನು ಹೇಳಿದಂತೆ ಕ್ರೂರಕರ್ಮವನ್ನು ಮಾಡಲಾಗಲಿಲ್ಲವೆಂದು ಅವಳು ತಿಳಿಸಿದಳು.

ಎಷ್ಟೇ ಆಗಲಿ ಹೆಂಗರುಳು. ಆದರೂ ಏನಾದರೂ ಬೇರೊಂದು ಉಪಾಯವನ್ನು ಮಾಡಿ ರಾಮಾನುಜರನ್ನು ಮುಗಿಸಲೇಬೇಕೆಂದು ಯೋಚಿಸಿದನು.

ಮುಂಜಾನೆ ಎಂದಿನಂತೆ ರಾಮಾನುಜರು ಶ್ರೀ ರಂಗನಾಥನ ದರ್ಶನಕ್ಕೆ ಬಂದರು. ಆಗ ಅರ್ಚಕನು ಸ್ವಾಮಿಯ ಮಜ್ಜನದ ತೀರ್ಥಕ್ಕೆ ವಿಷಬೆರಸಿ, ಕೈ ನಡುಗಿಸುತ್ತಾ ಅವರಿಗೆ ಕೊಟ್ಟನು. ರಾಮಾನುಜರಿಗೆ ಅದು ವಿಷಪೂರಿತ ಜಲವೆಂದು ತಿಳಿಯಿತು. ಆದರೂ "ಸ್ವಾಮಿಯ ಪಾದೋದಕ, ಅಮೃತ, ಇದನ್ನು ಪಡೆದ ನಾನೇ ಧನ್ಯನೆಂದು, ಆ ತೀರ್ಥವನ್ನು ಕುಡಿದು ಆನಂದದಿಂದ ರಂಗನನ್ನು ಕೊಂಡಾಡಿದರು. ಅರ್ಚಕರಿಗೆ ಒಳ್ಳೆಯದನ್ನು ಮಾಡೆಂದು ಪ್ರಾರ್ಥಿಸಿದರು".

**ರಾಗ-ಭೈರವಿ** **ಆದಿತಾಳ**

,ಕರುಣೆಸೋರಂಗ । ಅವರ ಕೈಬಿಡದೆ ।
,ತೊರೆಯಬೇಡವೊ ನಿನ್ನ । ಅರ್ಚಕರನ್ನು ಸದಾ ॥ಪ॥
,ಮರುಳುತನದಲಿ । ವಿಷವಬೆರಸಿ ನಿನ್ನ ।
,ಚರಣ ಕಮಲಗಳ । ತೀರ್ಥವ ಕೊಟ್ಟರು ॥೧॥

,ಮರಣಕ್ಕದರಿನಾ । ಕುಡಿಯದ ಬಿಟ್ಟರ ।
,ಪರಮಪಾಪಿನಾ । ನಾಗುವೆನೆಂದರಿತು ॥
,ಪರಮಪದವನಿನ್ನ । ಸೇರುವತವಕದಿ ।
,ಗರಳನೆಕುಡಿದರು । ಅಮೃತವಾಗಿಸಿದೆ ॥೨॥

,ಕುಡಿದೆನಾಸವನು । ದೂರಮಾಡಿವರೆ ।
,ಕಡುಪಾಪಿಯಾಗುವೆ । ನೆಂಬಭೀತಿಯಿಂ ॥
,ತಡಮಾಡದದನು । ಸೇವಿಸಿದೆ ಭಕ್ತಿಯಿಂದ ।
,ಮಾಡಿದೆ ಅದನೆ ನೀ । ಮಧುರಾಮೃತವ ॥೩॥

ಎಂದು ಹಾಡಿ ಉರುಳು ಸೇವೆ ಮಾಡಿದರು.

ಅರ್ಚಕನು ಇವರ ಉರುಳು ಸೇವೆಯನ್ನು ನೋಡಿ, ಇವರ ಕಥೆ ಇಂದು ಮುಗಿಯಿತೆಂದು ಭಾವಿಸಿದನು. ಬೆಳಗಾಗ ಇವರ ದೇಹವು ಸ್ಮಶಾನ ಸೇರುವುದೆಂದು ತಿಳಿದು ಹರ್ಷಭರಿತನಾದನು.

ಆದರೆ ಬೆಳಗಾಗ, ವಿಷ ಸೇವಿಸಿದ ರಾಮಾನುಜರು ಜೀವಂತರಾಗಿದ್ದಾರೆಂಬ ಸುದ್ದಿ ಶ್ರೀರಂಗದ ಮೂಲೆಮೂಲೆಗೂ ಹರಡಿತು. ಈ ಅತ್ಯಾಶ್ಚರ್ಯ ಸುದ್ದಿ ಕೇಳಿ ಸ್ತ್ರೀ-ಪುರುಷರೆಲ್ಲರೂ ರಾಮಾನುಜರ ದರ್ಶನಕ್ಕಾಗಿ ಗುಂಪು ಗುಂಪಾಗಿ ಧಾವಿಸಿದರು. ಅಲ್ಲಿ ರಾಮಾನುಜರು ಎಂದಿನಂತೆ ಹರ್ಷಚಿತ್ತರಾಗಿರುವುದನ್ನು ನೋಡಿ ಅವರ ಸುತ್ತಲೂ ತಿರುಗುತ್ತ, ಆನಂದ ಭರಿತರಾಗಿ ಭಜನೆ ಮಾಡುತ್ತಿದ್ದರು.

**ರಾಗ-ಸಾಮ** **ಆದಿತಾಳ**

,ಭಜಿಸಿಯತಿರಾಜರ । ಭಜಿಸಿಯತಿರಾಜರ ।
,ಭಜಿಸಿಯತಿರಾಜರ । ಸುಜನರಾಗುವ ನಾವು ॥ಪ॥
,ಅಜರೆಲ್ಲರು ಸೇರಿ । ಪರಮ ವೈಷ್ಣವರಿವಗೆ ।
,ಸಜ್ಜಿತರಾಗಿ ನಭದಿ । ಕುಸುಮಮಳೆಗರೆವರು ॥೧॥

,ವಿಷವಭುಂಜಿಸಿದರು । ಭವವತೊರೆಯದೆ ।
,ವಿಷಣ್ಣರದುಃಖವ । ದೂರಮಾಡಲುಬಂದ ॥
,ವಿಷಧರಲಕ್ಷ್ಮಣ । ಸ್ವಾಮಿಯೆ ಇವರು ।
,ಶೇಷಶಯನರಂಗ । ನಾಥನ ಭಕ್ತರ ॥೨॥

ಈ ರೀತಿ ಯತಿರಾಜರನ್ನು ಭಜಿಸುತ್ತಾ ಆನಂದದಿಂದ ಭಕ್ತರು ಜಯಘೋಷ ಮಾಡುತ್ತಿದ್ದರು. ಎಲ್ಲರಲ್ಲೂ ಸತ್ವಗುಣ ಮೂಡಿಬಂತು. ಯತಿರಾಜರು ಜನಸ್ತೋಮವನ್ನು ನೋಡಿ ಆನಂದಭರಿತರಾದರು. ಅವರ ಕಣ್ಣುಗಳಿಂದ ಆನಂದ ಬಾಷ್ಪಗಳು ಸುರಿದವು. ಹಾಗೆಯೇ ಅವರ ಮನಸ್ಸು ಶ್ರೀ ರಂಗನಾಥನಲ್ಲಿ ತಲ್ಲೀನವಾಗಿ ಮೈಮರೆತರು.

ಅರ್ಚಕನು ಮಠದಲ್ಲಿ ಆಗುತ್ತಿದ್ದ ನೂರಾರು ಜನರ ಗದ್ದಲವನ್ನು ಕೇಳಿ ನೋಡೋಣವೆಂದು ಮಠಕ್ಕೆ ಬಂದನು. ಅಲ್ಲಿ ರಾಮಾನುಜರ ದಿವ್ಯ ತೇಜೋಮಯ ಹಾಗೂ ಶಾಂತ ಮುಖವನ್ನು ನೋಡಿ ದಿಗ್ಭ್ರಾಂತನಾದನು. ರಾಮಾನುಜರು ದೇವತೆಗಳಂತೆ ಅಮರರೆಂದು ತಿಳಿದು ಕಣ್ಣೀರಿಡುತ್ತಾ ಅವರ ಪಾದಗಳಿಗೆ ಎರಗಿದನು. ತನ್ನ ಹೀನ ಕೃತ್ಯಕ್ಕೆ ಕ್ಷಮೆಯಾಚಿಸಿದನು.

**ಅರ್ಚಕ:** ಯತಿರಾಜರೇ, ನನ್ನನ್ನು ಕೂಡಲೇ ಯಮಲೋಕಕ್ಕೆ ಕಳುಹಿಸಿ, ನನ್ನ ಪಾಪಕ್ಕೆ ತಕ್ಕ ಶಿಕ್ಷೆಯಾಗಲೇಬೇಕು. ನನ್ನನ್ನು ಆನೆಯ ಕಾಲುಗಳಿಂದ ತುಳಿಸಿ, ಇಲ್ಲವೇ ಉರಿಯುವ ಬೆಂಕಿಯಲ್ಲಿ ತಳ್ಳಿಬಿಡಿ". ಹೀಗೆ ಗೋಳಾಡುತ್ತಾ ತಲೆಯನ್ನು ಕಂಬಕ್ಕೆ ಹೊಡೆದುಕೊಂಡು ರಕ್ತಹರಿಸಿದನು.

**ರಾಮಾನುಜರು:** (ಎಚ್ಚೆತ್ತ ಮೇಲೆ) ಆತನನ್ನು ಸಮಾಧಾನಪಡಿಸಿದರು. ಶ್ರೀ ರಂಗನಾಥನು ನಿಮ್ಮ ಅಪರಾಧಗಳನ್ನು ಕ್ಷಮಿಸಿದ್ದಾನೆ" ಎಂದು ತಿಳಿಸಿ, ಆತನನ್ನು ಪ್ರೀತಿಯಿಂದ ಮೈದಡವಿದರು. ಹೀಗೆ ಅರ್ಚಕರು ಅವರ ಕೃಪೆಯಿಂದ ದೈವತ್ವವನ್ನು ಪಡೆದು ಪುನೀತರಾದರು.



# 17

# ಯಜ್ಞಮೂರ್ತಿ

**ಯಜ್ಞಮೂರ್ತಿ**ಗೆ ಅರುಳಾಳ ಪೆರುಮಾಳ್ ಎಂಬ ಬೇರೆ ಹೆಸರಿತ್ತು. ಎಲ್ಲ ವಿದ್ವಾಂಸರನ್ನು ಪಾಂಡಿತ್ಯದಿಂದ ಗೆದ್ದುಬಂದ ಪ್ರಕಾಂಡ ಪಂಡಿತ. ಉತ್ತರ ಭಾರತದಲ್ಲಿ ಸಂಚರಿಸಿ ಅಲ್ಲಿನ ವಿದ್ವಾಂಸರನ್ನೆಲ್ಲಾ ಗೆದ್ದಿದ್ದನು.

ಶ್ರೀರಂಗದಲ್ಲಿ ಶ್ರೀ ವೈಷ್ಣವ ಸನ್ಯಾಸಿ ರಾಮಾನುಜರೆಂಬ ಉದ್ದಾಮಪಂಡಿತರಿದ್ದಾರೆ. ಅವರು ಮಾಯಾ ವಾದವನ್ನು ತಳ್ಳಿ ಹಾಕಿದ್ದಾರೆ. ತಮ್ಮದೇ ಆದ ತತ್ವವನ್ನು ಪ್ರಚಾರ ಮಾಡುತ್ತಿದ್ದಾರೆ ಎಂಬ ವಿಷಯ ತಿಳಿದ ಕೂಡಲೆ ಯಜ್ಞಮೂರ್ತಿಗಳು ಭಾಗೀರಥಿಯ ದಡದಲ್ಲಿ ಸನ್ಯಾಸ ಸ್ವೀಕರಿಸಿ, ರಾಮಾನುಜರನ್ನು ನೋಡಲು ಶ್ರೀರಂಗಕ್ಕೆ ಬಂದರು. ಇವರು ಎಲ್ಲಿಗೇ ಹೋದರು ಒಂದು ಗಾಡಿಯ ತುಂಬ ಶಾಸ್ತ್ರ ಗ್ರಂಥಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುತ್ತಿದ್ದರು.

ಆ ಪಂಡಿತರು ಚರ್ಚಾಗೋಷ್ಠಿಗೆ ಬರುವಂತೆ ರಾಮಾನುಜರಿಗೆ ಕರೆ ಕಳುಹಿಸಿದರು.

ರಾಮಾನುಜರು ವಿಷಯ ತಿಳಿದು ಯಜ್ಞಮೂರ್ತಿಗಳ ಬಳಿ ಬಂದರು.

**ರಾಮಾನುಜರು:** ಸ್ವಾಮಿ, ಚರ್ಚೆಬೇಕಾಗಿಲ್ಲ. ತಾವು ಇಡೀ ಭಾರತದ ವಿದ್ವಾಂಸರನ್ನೆಲ್ಲಾ ಗೆದ್ದು ಬಂದಿರುವ ಮಹಾನ್ ವಿದ್ವನ್ಮಣಿಗಳು. ತಮ್ಮಲ್ಲಿ ನನ್ನ ಸೋಲನ್ನು ಒಪ್ಪಿಕೊಳ್ಳುತ್ತೇನೆ.

**ಯಜ್ಞಮೂರ್ತಿ:** ಸೋಲನ್ನೊಪ್ಪುವುದೆಂದರೆ ದೋಷರಹಿತವಾದ ಮಾಯಾವಾದವನ್ನು ಒಪ್ಪಿಕೊಂಡಂತೆ ಹಾಗೂ ಭ್ರಮೋತ್ಪಾದಕ ವೈಷ್ಣವ ಸಿದ್ಧಾಂತವನ್ನು ತ್ಯಜಿಸಿದಂತೆ.

**ರಾಮಾನುಜರು:** (ಯಜ್ಞಮೂರ್ತಿಗಳ ಮಾತುಗಳನ್ನು ಅವರಿಗ ಹಿಂದಿರುಗಿಸಿ) ಕೇವಲ ಮಾಯಾವಾದಿಗಳೇ ಮಾಯೆಯೆಂಬ ಹೆಸರಿನಲ್ಲಿ ಹುಚ್ಚರಾಗಿರುತ್ತಾರೆ. ಅವರ ಸಿದ್ಧಾಂತ, ತರ್ಕ, ವಿಚಾರ, ಎಲ್ಲವೂ ಮಾಯೆಯೇ ಅಂದ ಮೇಲೆ ಮಾಯಾಸಿದಾಂತವು ದೋಷರಹಿತವಾಗಿರಲು ಹೇಗೆ ಸಾಧ್ಯ?

**ಯಜ್ಞಮೂರ್ತಿ:** ಕಾಲ, ದೇಶ, ಕಾರಣಗಳಿಗೊಳಪಟ್ಟದ್ದೆಲ್ಲವೂ ಮಾಯೆಯೇ, ಈ ಮೂರನ್ನೂ ದಾಟದ ಹೊರತು ನಿಜ ತತ್ವ(ಸತ್ಯ)ವನ್ನರಿಯಲು ಸಾಧ್ಯವಿಲ್ಲ. ಇದು ಮಾಯಾವಾದಿಗಳ ಅಭಿಪ್ರಾಯ. ಅಂದ ಮೇಲೆ ಯಾವುದನ್ನು ನಾವು ಭ್ರಮೆ ಅಥವಾ ಮಾಯೆಯೆಂದು ತಿಳಿದಿದ್ದೇವೆಯೋ ಅದನ್ನೇ ನೀವು ಸತ್ಯವೆಂದು ಭಾವಿಸಿದ್ದೀರಿ. ಆದ್ದರಿಂದ ಮಾಯೆಗೆ ಒಳಪಟ್ಟವರು ನಾವಲ್ಲ, ನೀವು. ಹೀಗೆ ಇಬ್ಬರಿಗೂ ಹದಿನೇಳು ದಿನಗಳು ಸತತ ವಾದವಿವಾದಗಳು ಜರುಗಿ, ಕೊನೆಗೆ ಯತಿರಾಜರು ದುಃಖಭರಿತರಾಗಿ ಸೋಲನ್ನೊಪ್ಪ ಬೇಕಾಯಿತು.

ಮಠಕ್ಕೆ ಹಿಂದಿರುಗಿ ಶ್ರೀ ರಂಗನಾಥನ ಮುಂದೆ ಕೈಜೋಡಿಸಿ ಪ್ರಾರ್ಥಿಸಿದರು.

**ರಾಮಾನುಜರು:** ಯಾವ ವೈಷ್ಣವ ವೇದ, ಧರ್ಮ, ಶಾಸ್ತ್ರಗಳಿಂದ ಹಿಂದಿನ ಗುರುಗಳು ನಿನ್ನ ಪಾದ ಕಮಲಗಳನ್ನು ಪಡೆದು ಪುನೀತರಾದರೋ ಅವೆಲ್ಲವೂ ಇನ್ನು ಕೆಲವೇ ಕಾಲದಲ್ಲಿ ಮಾಯಾವಾದದ ಮೋಡಗಳಲ್ಲಿ ಮುಚ್ಚಿ ಹೋಗುತ್ತವೆ. ಮಾಯಾವಾದಿಗಳು ನಿಗೂಢ ತರ್ಕ ವಿತರ್ಕಗಳಿಂದ ಅವರೂ ಭ್ರಮೆಯಲ್ಲಿ ಮುಳುಗುವುದಲ್ಲದೆ ಇತರೆ ಜನರನ್ನೂ ಸಹ ಮುಳುಗಿಸುತ್ತಾರೆ. ಅವರ ತರ್ಕಜಾಲ ದೊಡ್ಡ ದೊಡ್ಡ ಮಹಾತ್ಮರನ್ನೂ ಸಹ ವ್ಯಥಿತರನ್ನಾಗಿ ಮಾಡುತ್ತದೆ. ಹೇ ಪರಮಾನಂದ ಮೂರ್ತಿಯೇ ನಿನ್ನ ಮಕ್ಕಳನ್ನು (ಸಂತಾನ) ಎಲ್ಲಿಯವರೆಗೆ ನಿನ್ನ ಪವಿತ್ರ ಪಾದಗಳಿಂದ ದೂರವಿಡುವೆ" ಎಂದು ಕಣ್ಣೀರಿಟ್ಟರು.

ಅದಿನ ರಾತ್ರಿ ಸ್ವಪ್ನದಲ್ಲಿ ದೇವರಾಜ ವರದರಾಜನ ದರ್ಶನವಾಯಿತು. "ಯತಿರಾಜ, ಚಿಂತಿಸದಿರು. ಭಕ್ತಿಯ ನಿಜ ಮಹತ್ವವನ್ನು ಪ್ರಪಂಚದಲ್ಲಿ ಹರಡಲು ನೀನೊಬ್ಬನೇ ಸಮರ್ಥ. ಆ ಕೆಲಸ ನಿನ್ನಿಂದ ಅತಿಶೀಘ್ರದಲ್ಲೇ ನೆರವೇರುವುದು" ಎಂದನು.

ಮರುದಿನ ಸಂತೋಷಭರಿತರಾಗಿ ಯಜ್ಞಮೂರ್ತಿಗಳನ್ನು ಭೇಟಿ ಮಾಡಲು ಮತ್ತೆ ಹೊರಟರು.

ಅಂದಿನ ಅವರ ದಿವ್ಯ ತೇಜಸ್ಸನ್ನು ನೋಡಿ ಯಜ್ಞಮೂರ್ತಿಗಳಿಗೆ ದೈವ ಪುರುಷನನ್ನು ಕಂಡಂತಾಯಿತು.

ನಿನ್ನೆಯ ದಿನ ಖಿನ್ನರಾಗಿ ಹೋದವರು ಈ ದಿನ ದಿವ್ಯ ಸ್ವರೂಪರಾಗಿ ತೋರುತ್ತಿದ್ದಾರೆ. ಏನಾಶ್ಚರ್ಯವೆಂದು ಯಜ್ಞಮೂರ್ತಿಗಳ ಮನಸ್ಸಿಗೆ ಬಂದಿತು.

"ಇಂತಹ ಮಹಾತ್ಮರಲ್ಲಿ ನನ್ನ ಒಣವಾದವನ್ನೂ, ವಿಚಾರವನ್ನೂ ದೂರ ಮಾಡಿ ಸೋಲನ್ನೊಪ್ಪಿಕೊಳ್ಳುವುದೇ ಲೇಸು. ಇಂತಹ ಮಹಾಮಹಿಮನ ಶರಣು ಹೋಗುವುದೇ ಒಳ್ಳೆಯದು. ನಾನು ನನ್ನ ಅಂಹನ್ನು ಪೋಷಿಸಿದೆ, ಹೃದಯವನ್ನು ಕ್ಷೀಣಿಸಿದೆ. ಹೃದಯ ಶುದ್ಧಿಯಿಲ್ಲದೆ **ಬ್ರಹ್ಮಜ್ಞಾನ** ಬರಿಯಕೂಗು ಮಾತ್ರ".

ಈ ಮಹಾತ್ಮ ಎಷ್ಟು ಸರಳ, ಸಹಜ, ನಿಷ್ಕಳಂಕ ವ್ಯಕ್ತಿ. ಅವರ ಭಕ್ತಿ ಸೌಂದರ್ಯ ನಮ್ಮ ನಿಲುಕಿಗೆ ಸಿಗದಂತಹದ್ದು.

"ನಾನು ಎಷ್ಟು ಒರಟಾಗಿ, ಕೋಪದಿಂದ ಮಾತುಗಳನ್ನಾಡಿದರೂ ಈ ಸೌಜನ್ಯಮೂರ್ತಿ ಅವುಗಳನ್ನು ಲೆಕ್ಕಿಸದೆ ನಗುನಗುತ್ತಲೇ ಉತ್ತರಿಸಿದರು. ಇಂತಹ ಮಹಾಪುರುಷನ ಶಿಷ್ಯನಾದರೆ ನನ್ನ ಪಾಪಗಳೆಲ್ಲ ದೂರವಾಗುವುವು" ಎಂದು ಯೋಚಿಸಿದರು.

"ನಾನು ನನ್ನ ಅಂಹನ ಬೇರನ್ನು ಕಿತ್ತೊಗೆಯಬೇಕು. ಶುದ್ಧಸತ್ವದ ಅಮೃತಪಾನ ಮಾಡಬೇಕು". ಈ ರೀತಿ ಸಂಕಲ್ಪಿಸಿ, ಯಜ್ಞಮೂರ್ತಿಗಳು ಯತಿರಾಜರ ಪಾದಗಳನ್ನು ಹಿಡಿದರು.

**ಯತಿರಾಜರು:** (ಈ ದೃಶ್ಯವನ್ನು ನೋಡಿ ವಿಹ್ವಲರಾಗಿ ಹೇಳಿದರು) ನಿಮ್ಮಂತಹ ಮಹಾನುಭಾವರು ಈ ದಿನದ ಚರ್ಚೆಯನ್ನು ಪ್ರಾರಂಭಿಸದೆ ಹೀಗೆ ಮಾಡಬಾರದೆಂದು ಪ್ರಾರ್ಥಿಸುತ್ತೇನೆ.

**ಯಜ್ಞಮೂರ್ತಿ:** ಓ ವಿಶಾಲ ಹೃದಯಮೂರ್ತಿಯೇ, ಇನ್ನು ನಾನು ತಮ್ಮೊಂದಿಗೆ ಚರ್ಚಿಸಲಾರೆ, ತಮ್ಮ ದಾಸನಾಗಿ, ತಮ್ಮ ಮುಂದೆ ನಿಂತಿದ್ದೇನೆ. ನನ್ನನ್ನು ತಮ್ಮ ಶಿಷ್ಯನನ್ನಾಗಿ ಪರಿಗಣಿಸಿ, ನನ್ನ ಮೇಲೆ ಕೃಪೆತೋರಿ. ನನ್ನ ಮನದ ಕತ್ತಲೆಯನ್ನು ಹೋಗಲಾಡಿಸಿ, ಜ್ಞಾನ ಪ್ರಕಾಶವನ್ನು ನೀಡಿ.

**ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾಶ್ರುತೇನ ।**

ಕೇವಲ ವೇದ ಪಾರಂಗತನಾಗುವುದರಿಂದ, ಬುದ್ಧಿವಂತಿಕೆಯಿಂದ, ಇಲ್ಲವೇ ಹೆಚ್ಚು ಕೇಳುವುದರಿಂದ ಆತ್ಮವು ಲಭ್ಯವಾಗುವುದಿಲ್ಲ.

ಇದುವರೆವಿಗೂ ನನ್ನ ಪ್ರಕಾಂಡ ಪಾಂಡಿತ್ಯದಿಂದ ಅಹಂಕಾರವನ್ನು ಮಾತ್ರ ಬೆಳಸಿದ್ದೆ. "ಈ ದಾಸನಿಗೆ ತಮ್ಮ ಪವಿತ್ರ ಪಾದಗಳಲ್ಲಿ ಸ್ಥಾನವನ್ನು ಕೊಡಿ ಎಂದು ಪ್ರಾರ್ಥಿಸಿದರು".

ಯಜ್ಞಮೂರ್ತಿಗಳಲ್ಲಾದ ಈ ಪರಿವರ್ತನೆಯನ್ನು ನೋಡಿ ರಾಮಾನುಜರು ಬೆರಗಾಗಲಿಲ್ಲ. ಕಾರಣ ಶ್ರೀ ವರದರಾಜನು ಅವರಿಗೆ ಕೊಟ್ಟಿದ್ದ ವಚನ ಸತ್ಯವಾಯಿತು.

ತಮ್ಮ ಸ್ವಾಮಿಯ ಪ್ರಭಾವದಿಂದಲೇ ಇಂತಹ ಪ್ರಕಾಂಡ ಪಂಡಿತರು ತಮ್ಮ ಅಹಂನ್ನು ದೂರ ಮಾಡಿ ದೈವಿಕ ಸೌಂದರ್ಯವನ್ನು ಹಾಗೂ ನಮ್ರತೆಯ ಆಭರಣವನ್ನು ಧರಿಸಲು ಯೋಗ್ಯರಾದರು.

**ರಾಮಾನುಜರು:** (ಹಿತನುಡಿಗಳಲ್ಲಿ) ಓ ಯಜ್ಞಮರ್ತಿಗಳೇ, ಪಾಂಡಿತ್ಯದ ಗರ್ವವನ್ನು ದೂರ ಮಾಡಲು ಭಗವಂತನೊಬ್ಬನಿಂದಲೇ ಸಾಧ್ಯ. ಶ್ರೀ ದೇವರಾಜನು ಆ ಕೆಲಸವನ್ನು ಮಾಡಿದ್ದಾನೆ. ನೀವೇ ಭಾಗ್ಯವಂತರು.

**ಯಜ್ಞಮೂರ್ತಿಗಳು:** ತಮ್ಮಂತಹ ಮಹಾತ್ಮರು ದೊರಕಿದುದು ನನ್ನ ಭಾಗ್ಯ. ತಾವು ಈ ಅಜ್ಞಾನಿ ಶಿಶುವಿಗೆ ಮುಂದೇನು ಮಾಡಬೇಕೆಂಬುದನ್ನು ತಿಳಿಸಿ.

**ಯತಿರಾಜರು:** ಎಲೈ ಮಗುವೆ, ಹೀಗೆಂದು ಶಾಸ್ತ್ರವಿಧಿಯಿದೆ.

ಹೀನೋಃಯಜ್ಞೋಪವೀತೇನ ಯದಿಸ್ಯಾತ್ ಧ್ಯಾನಭಿಕ್ಷುಕಃ ।
ತಸ್ಯಕ್ರಿಯಾನಿಷ್ಪಲಾಃ ಸ್ಯುಃಪ್ರಾಯಶ್ಚಿತ್ತಂ ವಿಧೀಯತೇ ॥
ಗಾಯತ್ರೀಸಹಿತಾನೇವ ಪ್ರಾಜಾಪತ್ಯಾನ್ ಷಡಾಚರೇತ್ ।
ಪುನಃ ಸಂಸ್ಕಾರ ಮಾಪೃತ್ಯಧಾರ್ಮ್ಯಂಯಜ್ಞೋಪವೀತಕಂ ॥
ಉಪವೀತಂ ತ್ರಿದಂಡಶ್ಚಪಾತ್ರಂಜಲಪವಿತ್ರಕಂ ।
ಕೌಪೀನಂ ಕಟಿಸೂತ್ರಂ ನ ತ್ಯಾಜ್ಯಂ ಯಾವದಾಯುಷಂ ॥
(ವೃದ್ಧಜಾಬಾಲಿಸ್ಮೃತಿ, ಶತಧೂಷಣಿ)

ಸಾಧಕನ ಧ್ಯಾನ ಪೂರ್ಣವಾದ ಮೇಲೆ, ಆತನಿಗೆ ಯಜ್ಞೋಪವೀತವಿಲ್ಲದ ಮೇಲೆ ಆತನ ಎಲ್ಲಾ ಕ್ರಿಯೆಗಳು ನಿಷ್ಫಲವಾಗುತ್ತವೆ. ಅಂತಹವನಿಗೆ ಪ್ರಾಯಶ್ಚಿತ್ತವೂ ಸಹ ವಿಹಿತವಾಗಿದೆ.

ಯಜ್ಞೋಪವೀತವನ್ನು ಧಾರಣೆ ಮಾಡಿ, ವಿಹಿತ ನಿಯಮಗಳಂತೆ ಪ್ರಾಜಾಪತ್ಯ (ಉಪವಾಸವಿದ್ದು ಮಾಡುವ ಒಂದು ತಪಸ್ಸು)ವನ್ನು ಗಾಯತ್ರಿಯೊಂದಿಗೆ ಆಚರಿಸಬೇಕು.

ಮರಣಾಂತ್ಯದವರೆಗೂ ಪುನಃ ಯಜ್ಞೋಪವೀತ, ತ್ರಿದಂಡ, ಕಮಂಡಲು, ಕೌಪೀನ ಮತ್ತು ಉಡಿದಾರ ಇವುಗಳನ್ನು ತ್ಯಜಿಸಬಾರದು.

ಹೀಗೆಂದು ಧರ್ಮಸೂತ್ರಗಳನ್ನು ತಿಳಿಸಿ ಯತಿರಾಜರು ಅವರಿಗೆ ಯಜ್ಞೋಪವೀತ, ಊರ್ಧ್ವಪುಂಡ್ರ, ಶಂಖ, ಚಕ್ರ, ಮುದ್ರೆ ಇವುಗಳನ್ನು ಧಾರಣೆ ಮಾಡಿದರು.ನಂತರ **ದೇವರಾಜ ಮುನಿ**ಯೆಂದು ಹೆಸರಿಟ್ಟರು. "ಇನ್ನು ಮುಂದೆ ನೀವು ಮಾನವತೆಯ ಉದ್ಧಾರಕ್ಕೆ ಬೇಕಾದ ಪುಸ್ತಕಗಳನ್ನು ಬರೆಯಿರಿ" ಎಂದು ತಿಳಿಸಿದರು.

ಗುರುವಿನಾಜ್ಞೆಯಂತೆ ಯಜ್ಞಮೂರ್ತಿಗಳು ತಮಿಳಿನಲ್ಲಿ 1. ಜ್ಞಾನಸಾರ 2. ಪ್ರಮೇಯಸಾರ ಎಂಬ ಎರಡು ಗ್ರಂಥಗಳನ್ನು ರಚಿಸಿದರು.

ಕೆಲವು ದಿನಗಳ ನಂತರ ನಾಲ್ವರು ಬುದ್ಧಿವಂತರು, ಸಹನಶೀಲರು, ತ್ಯಾಗಶೀಲರು, ರಾಮಾನುಜರ ಬಳಿ ದೀಕ್ಷೆಗಾಗಿ ಬಂದರು.

ಆದರೆ ರಾಮಾನುಜರು ಅವರನ್ನು ದೇವರಾಜ ಮುನಿಗಳಲ್ಲಿಗೆ ಕಳುಹಿಸಿದರು. ಕಾರಣ ರಾಮಾನುಜರು ದೇವರಾಜ ಮುನಿಗಳ ಇಂದಿನ ಸ್ವಭಾವವನ್ನು ತಿಳಿಯ ಬೇಕೆಂದಿದ್ದರು.

ದೇವರಾಜ ಮುನಿಗಳು ಪರೀಕ್ಷೆಯಲ್ಲಿ ಜಯಶಾಲಿಗಳಾದರು. ಹೀಗೆ ಅವರು ಅಂತಿಮ ಕಾಲದವರೆಗೂ ಶ್ರೀ ವರದರಾಜ ಸ್ವಾಮಿಯ ಹಾಗೂ ಶ್ರೀ ರಾಮಾನುಜರ ಸೇವೆಯಲ್ಲೇ ನಿರತರಾದರು.

– ❋ –

# 18

# ಯಜ್ಞೇಶರು ಮತ್ತು ವರದಾಚಾರ್ಯರು

ರಾಮಾನುಜರು ತಮ್ಮ ಶಿಷ್ಯರಿಗೆ ಒಂದು ಸಾವಿರ ಪದ್ಯಗಳ ತಮಿಳು ಪ್ರಬಂಧವನ್ನು ಬೋಧಿಸಿದರು. ಇವುಗಳನ್ನು ಅವರು ಮಹಾಪೂರ್ಣರು ಮತ್ತು ಮಾಲಾಧರರಲ್ಲಿ ಅಧ್ಯಯನ ಮಾಡಿದ್ದರು. ಅಪಾರ ಜ್ಞಾನಿಗಳಾದ ಇವರು ಆ ಪ್ರಬಂಧಗಳಿಗೆ ಹೊಸ ವಿವರಣೆಗಳನ್ನು ಕೊಟ್ಟರು. ಇವನ್ನು ಕೇಳಿದ ಅವರ ಶಿಷ್ಯರು ಆನಂದಭರಿತರಾದರು.

ಈ ಪ್ರಬಂಧದಲ್ಲಿ ಒಂದು ಕಡೆ ಶ್ರೀ ಶೈಲದ (ತಿರುಪತಿ) ವೈಭವದ ವರ್ಣನೆ ಬಂದಿತು.

ರಾಮಾನುಜರು ಈ ರೀತಿ ವರ್ಣಿಸಿದರು "ಶ್ರೀ ಶೈಲ ಈ ಭೂಮಿಯ ಮೇಲಿನ ವೈಕುಂಠ. ಯಾರು ಜೀವನಪರ್ಯಂತ ಇಲ್ಲಿ ವಾಸಿಸುವರೋ ಅವರಿಗೆ ಕಡೆಯಲ್ಲಿ ವೈಕುಂಠ ಲಭ್ಯವಾಗುವುದು. ಶ್ರೀ ಮನ್ನಾರಾಯಣನ ಚರಣಗಳಲ್ಲಿ ಆಶ್ರಯಪಡೆಯುವರು".

ಈ ರೀತಿ ಬೋಧಿಸಿ ತಮ್ಮ ಶಿಷ್ಯರಲ್ಲಿ "ಯಾರಾದರೂ ಶ್ರೀ ಶೈಲಕ್ಕೆ ಹೋಗಿ ಹೂ ದೋಟವನ್ನು ಮಾಡಿ ಆ ಹೂಗಳಿಂದ ಶ್ರೀನಿವಾಸನನ್ನು ಸೇವಿಸುತ್ತಾ ಕೊನೆ ಉಸಿರೆಳೆಯಲು ಸಿದ್ಧರಿದ್ದೀರಾ?" ಎಂದು ಪ್ರಶ್ನಿಸಿದರು.

ಅನಂತಾಚಾರ್ಯರು ಗುರುಗಳ ಮಾತಿಗೆ ಒಪ್ಪಿಗೆ ಕೊಟ್ಟರು.

**ರಾಮಾನುಜರು:** (ಅವರನ್ನು ಆಶೀರ್ವದಿಸಿ) ನೀನು ಭಾಗ್ಯವಂತ. ನಿನ್ನಂಥಹ ಶಿಷ್ಯನನ್ನು ಪಡೆದ ನಾನು ಧನ್ಯ. ನೀನು ನಿನ್ನ ವಂಶದ 14 ಪೀಳಿಗೆಯವರಿಗೆ ಮುಕ್ತಿ ದೊರಕಿಸುವ ಅಧಿಕಾರಿಯಾದೆ".

ಗುರು ರಾಮಾನುಜರ ಪಾದಾರ್ಚನೆ ಮಾಡಿ ಅನಂತಾಚಾರ್ಯರು ತಿರುಪತಿಗೆ ತೆರಳಿದರು.

ರಾಮಾನುಜರು ಇದೇ ಸಹಸ್ರ ಗೀತಿಯನ್ನು ತನ್ನ ಶಿಷ್ಯರಿಗೆ ಮೂರಾವರ್ತಿ ಬೋಧಿಸಿ, ನಂತರ ಶಿಷ್ಯರೊಡಗೂಡಿ ಶ್ರೀ ಶೈಲಕ್ಕೆ ತೆರಳಿದರು.

ಹರಿನಾಮ ಸ್ಮರಣೆಯೇ ಅವರ ಯಾತ್ರಾ ಸಾಮಗ್ರಿಯಾಯಿತು.

**ರಾಗ-ಯಮುನಾಕಲ್ಯಾಣಿ** **ಏಕತಾಳ**

ಹರಿಸ್ಮರಣೆ ಮಾಡೋ ನಿರಂತರ ||ಪ||
ಪರಗತಿಗೆ ಇದು ನಿರ್ಧಾರ ||ಅ||
ದುರಿತಗಜಕ್ಕೆ ಕಂಠೀರವನೆನಿಸಿದ |
ಶರಣಾಗತ ರಕ್ಷಕ ಪಾವನನ ನೀ ||೧||

ಸ್ಮರಣೆಗೈದ ಪ್ರಹ್ಲಾದನ ರಕ್ಷಿಸಿದ |
ದುರುಳಹಿರಣ್ಯಕ ನುದರವಸೀಳಿದ ||೨||

ತರುಣಿ ದ್ರೌಪದಿ ಮೊರೆಯಿಡಲಾಕ್ಷಣ |
ಭರದಿಂದಕ್ಷಯ ವಿತ್ತ ಮಹಾತ್ಮನ ||೩||

ಅಂದು ಅಜಾಮಿಳ ಕಂದನ ಕರೆಯಲು |
ಬಂದು ಸಲಹಿ ಆನಂದವ ತೋರಿದ ||೪||

ಶ್ರೀಶಪುರಂದರ ವಿಟ್ಠಲರಾಯನ |
ಸೃಷ್ಟಿಗೊಡೆಯನ ಮುಟ್ಟಿಭಜಿಸಿ ನೀ ||೫||

ಮೊದಲನೆಯ ದಿನ ದೇಹಲಿಯಲ್ಲಿ ವಿಶ್ರಾಂತಿ ಪಡೆದರು. ಮರುದಿನ ಅಷ್ಟಸಹಸ್ರವೆಂಬ ಹಳ್ಳಿ ಸೇರಿದರು. ಅಲ್ಲಿ ರಾಮಾನುಜರ ಶಿಷ್ಯರುಗಳಾದ ಯಜ್ಞೇಶ ಮತ್ತು ವರದಾಚಾರ್ಯರಿದ್ದರು.

ರಾಮಾನುಜರು ತಮ್ಮ ಇಬ್ಬರು ಶಿಷ್ಯರನ್ನು ಕರೆದು ತಿಳಿಸಿದರು – "ನೀವು ಮುಂದಾಗಿ ಯಜ್ಞೇಶನ ಮನೆಗೆ ಹೋಗಿ, ನಾವು ಬರುವುದಾಗಿ ತಿಳಿಸಿ ಬನ್ನಿ".

ಗುರುವಿನಾಜ್ಞೆಯಂತೆ ಇಬ್ಬರು ಶಿಷ್ಯರು ಯಜ್ಞೇಶರ ಮನೆಗೆ ಹೋಗಿ ಗುರುಗಳು ಅವರ ಮನೆಗೆ ಬರುವ ವಿಷಯವನ್ನು ತಿಳಿಸಿದರು.

ಯಜ್ಞೇಶರು ಆನಂದಭರಿತರಾಗಿ ತಮ್ಮ ಗುರುಗಳ ಸ್ವಾಗತಕ್ಕೆ ಬೇಕಾದ ಸಿದ್ಧತೆಗಳೆಲ್ಲವನ್ನೂ ಮಾಡಿರೆಂದು ತಮ್ಮ ಸೇವಕರಿಗೆ ಆಜ್ಞೆ ಮಾಡಿದರು. ತಮ್ಮ ಶ್ರೀಮಂತಿಕೆಯನ್ನು ಗುರುಗಳಿಗೆ ತೋರಿಸಬೇಕೆಂಬ ಹಂಬಲ. ಹೀಗಾಗಿ ಸುದ್ದಿ ಮುಟ್ಟಿಸಲು ಬಂದಿದ್ದ ವೈಷ್ಣವರಿಬ್ಬರನ್ನೂ ಮರತೇ ಬಿಟ್ಟರು. ಅವರಿಗೆ ಊಟೋಪಚಾರವೇ ಇಲ್ಲವಾಯ್ತು.

ಬೇಸತ್ತು ಕೂಡಲೇ ಅವರಿಬ್ಬರೂ ಗುರುಗಳಲ್ಲಿಗೆ ಬಂದು ಯಜ್ಞೇಶರ ದರ್ಪದ ಬಗ್ಗೆ ತಿಳಿಸಿದರು.

ಯತಿರಾಜರು ತಮ್ಮ ಶಿಷ್ಯರ ಕ್ಷೇಮವನ್ನೇ ವಿಚಾರಿಸದ ಅವರ ಮನೆಗೆ ಹೋಗಲು ನಿರಾಕರಿಸಿದರು.

ಆಗ ಬೇರೊಬ್ಬರು ಶಿಷ್ಯರಾದ ವರದಾಚಾರ್ಯರ ಅತಿಥಿಗಳಾಗಲು ನಿರ್ಧರಿಸಿದರು.

ವರದಾಚಾರ್ಯರು ಕಡುಬಡವರು. ಆದರೆ ವಿದುರಭಕ್ತಿಯುಳ್ಳವರು. ಭಿಕ್ಷೆಯೇ ಅವರ ವೃತ್ತಿ. ಲಕ್ಷ್ಮೀದೇವಿ ಅವರ ಪತ್ನಿ. ಅವರ ಮನೆಯ ಬಳಿ ಕೆಲವು ಹತ್ತಿ ಗಿಡಗಳಿದ್ದ ಕಾರಣ ಅವರನ್ನು ಕಾರ್ಪಾಸರಾಮರೆಂದು ಕರೆಯುತ್ತಿದ್ದರು.

ರಾಮಾನುಜರು ಶಿಷ್ಯರೊಡಗೂಡಿ ವರದಾಚಾರ್ಯರ ಮನೆಗೆ ಹೋದರು. ವರದಾಚಾರ್ಯರು ಭಿಕ್ಷೆಗೆ ಹೋಗಿದ್ದರು.

ಲಕ್ಷ್ಮೀದೇವಿಯು ಸದ್ಗುರುಗಳನ್ನೂ ಅನೇಕ ಶಿಷ್ಯರನ್ನೂ ನೋಡಿ ಓಡೋಡಿ ಬಂದು ನಮಸ್ಕರಿಸಿದಳು. ಎಲ್ಲರಿಗೂ ಕಾಲು ತೊಳೆಯಲು ನೀರು ಕೊಟ್ಟಳು. ವಿಶ್ರಮಿಸಿಕೊಳ್ಳಲು ಪ್ರಾರ್ಥಿಸಿದಳು.

ಸ್ವಲ್ಪ ಸಮಯದ ನಂತರ ಮನೆಯ ಮುಂದಿನ ಕೊಳವನ್ನು ತೋರಿಸಿ, ಅಲ್ಲಿಗೆ ಹೋಗಿ ಸ್ನಾನಾದಿಗಳನ್ನು ಮುಗಿಸಿಕೊಂಡು ದಯಮಾಡಿಸಿ, ಅಷ್ಟರಲ್ಲಿ ಶ್ರೀ ಮಹಾವಿಷ್ಣುವಿಗೆ ಪ್ರಸಾದ ಅಣಿ ಮಾಡುತ್ತೇನೆಂದು ಬಹಳ ವಿನೀತಳಾಗಿ ಅರಿಕೆ ಮಾಡಿಕೊಂಡಳು.

ಅಡಿಗೆ ಮನೆಯೊಳಕ್ಕೆ ಹೋಗಿ ನೋಡಿದಳು. ಒಂದು ಕಾಳು ಅಕ್ಕಿಯೂ ಸಹ ಇರಲಿಲ್ಲ. ಈಗ ಏನು ಮಾಡುವುದು. ಗುರುಗಳ, ಇತರ ವೈಷ್ಣವರ ಊಟೋಪಚಾರ ಹೇಗೆ ಮಾಡುವುದು ಎಂದು ದುಃಖಪಟ್ಟಳು. ಕಣ್ಣುಗಳಲ್ಲಿ ಕಣ್ಣೀರು ಧಾರಾಕಾರವಾಗಿ ಹರಿಯಿತು.

ಆಗ ಪಕ್ಕದ ಮನೆಯಲ್ಲಿದ್ದ ಶ್ರೀಮಂತ ವರ್ತಕನ ನೆನಪು ಬಂದಿತು.

ಅವನು ಲಕ್ಷ್ಮೀದೇವಿಯ ಸೌಂದರ್ಯಕ್ಕೆ ಮಾರು ಹೋಗಿದ್ದನು. ಲಂಪಟನಾದ ಅವನು ಹಿಂದೆ ಕೆಲವು ಹೆಂಗಸರನ್ನು ಲಕ್ಷ್ಮೀದೇವಿಯ ಬಳಿ ಕಳುಹಿಸಿ ಹಣದಾಶೆ ಉಂಟು ಮಾಡಿ ತನ್ನ ಕಡೆ ಅವಳನ್ನು ಸೆಳೆಯುವ ಪ್ರಯತ್ನ ಮಾಡಿ ವಿಫಲನಾಗಿದ್ದನು.

**ಲಕ್ಷ್ಮೀದೇವಿ:** ಈಗ ಗುರುಗಳನ್ನು ಸತ್ಕರಿಸಲೇಬೇಕು. ಅದಕ್ಕಿಂತ ಮಿಗಿಲಾದ ಸೌಭಾಗ್ಯ ಮತ್ತೊಂದಿಲ್ಲ. ಇಂತಹ ಬಿಕ್ಕಟ್ಟಿನ ಸಮಯದಲ್ಲಿ ನನ್ನ ಈ ಕ್ಷುಲ್ಲಕ, ರಕ್ತಮಾಂಸ ಭರಿತ ಶರೀರವನ್ನು ಆವರ್ತಕನಿಗೆ ವಿಕ್ರಯಿಸಿ, ನಾನು ಗುರುಗಳ ಸೇವೆ ಮಾಡಿ ಏಕೆ ಪುನೀತಳಾಗಬಾರದು.?

ಕೇಳಿದ್ದೇನೆ, ಕಲಿಯನ್ ಎಂಬುವನು ಕಳ್ಳತನಮಾಡಿ ತನ್ನ ಇಷ್ಟದೇವನನ್ನು ಪೂಜಿಸುತ್ತಿದ್ದನೆಂದು, ದೇವರೂ ಸಹ ಅವನ ಸೇವೆಗೆ ಮೆಚ್ಚಿ ಹೀಗೆ ಹೇಳಿದ್ದನೆಂದು

**ಮನ್ನಿಮಿತ್ತಂ ಕೃತಂ ಪಾಪಮಪಿ ಪುಣ್ಯಾಯಕಲ್ಪತೇ ।**
**ಮಾಮನಾದೃತ್ಯತು ಕೃತಂ ಪುಣ್ಯಂ ಪಾಪಾಯಕಲ್ಪತೇ ॥**

ನನಗಾಗಿ ಮಾಡಿದ ಪಾಪವೂ ಸಹ ಪುಣ್ಯವಾಗುತ್ತದೆ. ಆದರೆ ನನ್ನನಿರಾಕರಿಸಿ ಮಾಡಿದ ಪುಣ್ಯವೇ ಆದರೂ ಅದು ಪಾಪವಾಗಿ ಪರಿಣಮಿಸುತ್ತದೆ.

ಹೀಗೆಂದು ಯೋಚಿಸಿ ಕೂಡಲೇ ಲಕ್ಷ್ಮೀದೇವಿಯು ಹಿಂಬಾಗಿಲಿನಿಂದ ಹೊರಟು ವರ್ತಕನ ಮನೆ ಸೇರಿದಳು. ವರ್ತಕನ ಮುಂದೆ ಮನಬಿಚ್ಚಿ ಹೇಳಿದಳು.

**ಲಕ್ಷ್ಮೀದೇವಿ:** ಓ, ವರ್ತಕರೇ, ಈ ದಿನ ರಾತ್ರಿ ನಿಮ್ಮ ಆಸೆಯನ್ನು ಪೂರೈಸುತ್ತೇನೆ. ನಮ್ಮಮನೆಗೆ ಗುರುಗಳು ಹಾಗೂ ಅವರ ಶಿಷ್ಯರುಗಳು ಅತಿಥಿಗಳಾಗಿ ದಯಮಾಡಿಸಿದ್ದಾರೆ. ಅವರನ್ನು ಉಪಚರಿಸಲು ಬೇಕಾದ ಸಾಮಾಗ್ರಿಗಳನ್ನು ಕೂಡಲೇ ದಯವಿಟ್ಟು ಕಳುಹಿಸಿಕೊಡಿ.

ಲಕ್ಷ್ಮೀದೇವಿಯ ಮಾತುಗಳನ್ನು ಕೇಳಿ ವರ್ತಕನಿಗೆ ಆಶ್ಚರ್ಯವೂ ಆಯಿತು ಜೊತೆಗೆ ಆನಂದವೂ. ತಾನು ಹಿಂದೆ ಎಷ್ಟು ಪ್ರಯತ್ನಪಟ್ಟರು ಸಿಕ್ಕದ ಅವಳು ಇಂದು ತಾನೇ ತಾನಾಗಿ ಮುಂದೆ ಬಂದಿದ್ದಾಳೆ.

ವರ್ತಕ ಲಕ್ಷ್ಮೀದೇವಿಗೆ ಹೇಳಿದ – "ನಿನಗೆ ಬೇಕಾದ ಉತ್ತಮ ವಸ್ತುಗಳನ್ನೆಲ್ಲಾ ಕಳುಹಿಸಿ ಕೊಡುತ್ತೇನೆ ಚಿಂತಿಸಬೇಡ"

ವರ್ತಕನು ಕಳುಹಿಸಿಕೊಟ್ಟ ಸಾಮಾನುಗಳಿಂದ ಬಗೆ ಬಗೆಯ ಭಕ್ಷ್ಯಗಳನ್ನು ಸ್ವಾಮಿ ವಿಷ್ಣುವಿಗೆ ಸಿದ್ಧಪಡಿಸಿದಳು. ನೈವೇದ್ಯವನ್ನು ಸ್ವಾಮಿಗೆ ಅರ್ಪಿಸಿ, ಗುರುಗಳನ್ನು ಹಾಗೂ ಶಿಷ್ಯರುಗಳನ್ನು ಊಟಕ್ಕೆ ದಯಮಾಡಿಸಲು ಭಿನ್ನವಿಸಿಕೊಂಡಳು.

ಎಲ್ಲರಿಗೂ ಪ್ರೀತಿಯಿಂದ ಊಟ ಬಡಿಸಿದಳು.

ಎಲ್ಲರೂ ಬಗೆ ಬಗೆಯ ಭಕ್ಷ್ಯಗಳನ್ನು ಊಟ ಮಾಡಿ ಸಂತೃಪ್ತರಾದರು.

ಆ ವೇಳೆಗೆ ವರದಾಚಾರ್ಯರು ಭಿಕ್ಷೆ ತೆಗೆದುಕೊಂಡು ಮನೆಗೆ ಬಂದರು. ಬರುತ್ತಲೇ ಸದ್ಗುರುಗಳ ದರ್ಶನವಾಯಿತು. ಅವರಿಗಾದ ಮಹದಾನಂದ ವರ್ಣನಾತೀತವಾದದ್ದು.

ಕೂಡಲೇ ಬಂದು ಗುರುಗಳ ಪಾದಕಮಲಗಳನ್ನು ಘಟ್ಟಿಯಾಗಿ ಹಿಡಿದು ಆನಂದಬಾಷ್ಪ ಸುರಿಸಿದರು.

ಗುರುಗಳು ಹಾಗೂ ಶಿಷ್ಯರು ದಂಪತಿಗಳ ಸತ್ಕಾರದಿಂದ ಸಂತುಷ್ಟರಾದರು.

ವರದಾಚಾರ್ಯರು ತಾವಿಲ್ಲದಿದ್ದರೂ ಗುರುಗಳ ಆತಿಥ್ಯಸತ್ಕಾರವನ್ನು ಇಷ್ಟು ವಿಜೃಂಭಣೆಯಿಂದ ಮಾಡಿದ ತನ್ನ ಹೆಂಡತಿಯನ್ನು ಮನದಲ್ಲೇ ಶ್ಲಾಘಿಸಿದರು. ಆದರೆ ನಿರ್ಗತಿಕರಾದ ತಮ್ಮ ಮನೆಯಲ್ಲಿ ಇಷ್ಟೊಂದು ಪದಾರ್ಥಗಳು ಹೇಗೆ ಬಂದವು ಎಂಬ ಅನುಮಾನ ಉಂಟಾಯಿತು.

ಒಳಗೆ ಹೋಗಿ ತನ್ನ ಹೆಂಡತಿಯನ್ನು ವಿಚಾರಿಸಲು ಲಕ್ಷ್ಮೀದೇವಿಯು ಭಯಭೀತಳಾಗಿ ನಡೆದ ವಿಷಯವನ್ನೆಲ್ಲಾ ತಿಳಿಸಿದಳು.

ಆಗ ವರದಾಚಾರ್ಯರಿಗೆ ಕೋಪವೂ ಬರಲಿಲ್ಲ, ದುಃಖವೂ ಉಂಟಾಗಲಿಲ್ಲ. ತಮ್ಮ ಅನುಪಸ್ಥಿತಿಯಲ್ಲಿ ತಮ್ಮ ಹೆಂಡತಿ ಮಾಡಿದ ಈ ಆತಿಥ್ಯಕ್ಕೆ ಸಂತೋಷಪಟ್ಟರು. ಆನಂದದಿಂದ ಆಕೆಯ ಕೈಹಿಡಿದುಕೊಂಡು ಗುರುಗಳ ಮುಂದೆ ಕರೆತಂದು ನಿಲ್ಲಿಸಿ ಆಕೆಯನ್ನು ಹೊಗಳಲು ಪ್ರಾರಂಭಿಸಿದರು.

**ಶ್ರೀರಾಗ** **ಆದಿತಾಳ**

ಮಂಗಳ ಲಕ್ಷ್ಮೀನೀನೆ । ಲೇ ಎನ್ನಯ ಲಲನೆ ।।ಪ।।
ಮಂಗಳ ಮೂರುತಿ ಗುರುಗಳ ಸೇವಿಸೆ ।
ಮಂಗಳ ಶಪಥವ ನೀ ಕೈಗೊಂಡು ।
ವೈಷ್ಣವಧರ್ಮವ ಪರಿಪಾಲಿಸಿದೆ ।।೧।।

ಗುರುಗಳಪಾಪಕೆ ಎರಗಿ ನಿನ್ನಯ ।
ಮುಂದಿನಪಾಪವ ಪರಿಹರಿಸಿರೆಂದು ॥
ವರಗಳ ನೀಡುವ ಯತಿರಾಜರನು ।
ಕುಂದದಭಕ್ತಿಯಿಂ ಪ್ರಾರ್ಥಿಸು ಇಂದು ॥೨॥

ಹೀಗೆ ಭಕ್ತಿಯಿಂದ ಗುರುಗಳನ್ನು ಪ್ರಾರ್ಥಿಸಿ, ದಂಪತಿಗಳೀರ್ವರೂ ಅವರ ಚರಣ ಕಮಲಗಳಿಗೆರಗಿದರು. ಲಕ್ಷ್ಮೀದೇವಿಯು ಭಯಭೀತಳಾಗಿ ನಡುಗುತ್ತಾ ಒಳಗೆ ಹೋದಳು.

ಗುರುಯತಿರಾಜರಿಗೆ ಈ ಪ್ರಾರ್ಥನೆಯನ್ನು ಕೇಳಿ ವ್ಯಥೆಯುಂಟಾಯಿತು. ವರದಾಚಾರ್ಯರನ್ನು ಹತ್ತಿರ ಕರೆದು ಇದರ ಗೂಢಾರ್ಥವೇನೆಂದು ಕೇಳಿದರು. ಆಗ ಆಚಾರ್ಯರು ನಡೆದ ಸಂಗತಿಯನ್ನು ಗುರುಗಳಲ್ಲಿ ನಿವೇದಿಸಿಕೊಂಡರು. ಈ ದಾರುಣ ವಿಷಯವನ್ನು ಕೇಳಿ ಎಲ್ಲರೂ ವಿಷಣ್ಣರಾದರು.

**ಯತಿರಾಜರು:** "ಎಲೈ ದಂಪತಿಗಳಿರಾ, ನೀವಿಬ್ಬರೂ ಇಂದಿನ ಪ್ರಸಾದವನ್ನು ತೆಗೆದುಕೊಂಡು ಆ ವರ್ತಕನ ಮನೆಗೆ ಹೋಗಿ ಆತನಿಗೆ ಕೊಡಿ" ಎಂದು ಆಜ್ಞಾಪಿಸಿದರು.

ಗುರುಗಳಾಜ್ಞೆಯಂತೆ ಇಬ್ಬರೂ ಪ್ರಸಾದವನ್ನು ತೆಗೆದುಕೊಂಡು ವರ್ತಕನ ಮನೆಗೆ ಹೋದರು. ಆಚಾರ್ಯರು ಹೊರಬಾಗಿಲಲ್ಲೇ ನಿಂತರು. ಲಕ್ಷ್ಮೀದೇವಿಯು ಪ್ರಸಾದವನ್ನು ತೆಗೆದುಕೊಂಡು ವರ್ತಕನ ಕೋಣೆಗೆ ಹೋದಳು. ಈ ಪ್ರಸಾದವನ್ನು ತೆಗೆದುಕೊಳ್ಳುವಂತೆ ಆ ವರ್ತಕನನ್ನು ಕೇಳಿಕೊಂಡಳು.

ವರ್ತಕನು ಆನಂದದಿಂದ ಆ ಪ್ರಸಾದವನ್ನು ತೆಗೆದುಕೊಂಡನು. ಕೂಡಲೇ ಅವನಲ್ಲಿದ್ದ ಕಾಮವಾಸನೆ ಸಂಪೂರ್ಣವಾಗಿದಗ್ಧವಾಗಿ ಹೋಯಿತು. ತಾನು ಕಣ್ಣೀರಿಡುತ್ತಾ "ನೀನು ನನ್ನ ತಾಯಿ" ಎಂದು ಹೇಳುತ್ತಾ ಲಕ್ಷ್ಮೀದೇವಿಯ ಕಾಲಿಗೆ ಬಿದ್ದನು.

ಲಕ್ಷ್ಮೀದೇವಿ ವರ್ತಕನಲ್ಲಾದ ಪರಿವರ್ತನೆಯನ್ನು ಕಂಡು ದಿಗ್ಭ್ರಾಂತಳಾದಳು.

ವರ್ತಕನು ಆ ದಂಪತಿಗನ್ನು ಕೇಳಿಕೊಂಡನು – "ದಯವಿಟ್ಟು ನನ್ನನ್ನು ತಮ್ಮ ಸದ್ಗುರುಗಳ ಬಳಿ ಕರೆದುಕೊಂಡು ಹೋಗಿ, ಪಾಪಿಯಾದ ನಾನು ಅವರ ಪಾದ ಸ್ಪರ್ಶಮಾಡಿ ಪುನೀತನಾಗುತ್ತೇನೆ".

ಆ ದಂಪತಿಗಳು ಮೂಕರಾಗಿ, ಆ ವರ್ತಕನನ್ನು ಜೊತೆಯಲ್ಲಿ ಕರೆದುಕೊಂಡು ಗುರುಗಳ ಸನ್ನಿಧಿಗೆ ಬಂದರು.

ದಂಪತಿಗಳಿಬ್ಬರೂ ಗುರುಗಳ ಪಾದಗಳಿಗೆರಗಿದರು. ವರ್ತಕನೂ ಸಹ ಕಣ್ಣೀರಿಡುತ್ತಾ ಗುರುಗಳ ಪಾದಗಳನ್ನು ಘಟ್ಟಿಯಾಗಿ ಹಿಡಿದುಕೊಂಡು ಪ್ರಾರ್ಥಿಸಿದ "ಹೇ ಗುರುವರ್ಯಾ ತಾವು ಈ ಪಾಪಿಯನ್ನು ಶಿಷ್ಯನನ್ನಾಗಿ ಸ್ವೀಕರಿಸಿ, ನನ್ನ ಪಾಪಪರಿಹಾರವಾಯಿತೆಂದು ಅನುಜ್ಞೆಯಿತ್ತರೆ ಮಾತ್ರ ತಮ್ಮ ಪಾದಗಳನ್ನು ಬಿಡುತ್ತೇನೆ".

ಆಗ ಯತಿರಾಜರು ವರ್ತಕನಿಗೆ ಶಿಷ್ಯನನ್ನಾಗಿ ಸ್ವೀಕರಿಸುವೆನೆಂದು ವಾಗ್ದಾನ ಮಾಡಿದರು. ಅದರಂತೆ ಆತನಿಗೆ ದೀಕ್ಷೆಯನ್ನು ಕೊಟ್ಟು ಪುನೀತನನ್ನಾಗಿಸಿದರು.

**ವರ್ತಕ:** ಗುರುವರ್ಯಾ, ಆ ದಂಪತಿಗಳೇ ನನ್ನ ಉದ್ಧಾರಕ್ಕೆ ಕಾರಣಕರ್ತರು. ಆದ್ದರಿಂದ ನನ್ನ ಸಂಪತ್ತಿನಲ್ಲಿ ಅರ್ಧವನ್ನು ಅವರಿಗೆ ಧಾರೆಯೆರೆದು ಕೊಡುತ್ತೇನೆ.

ಯತಿರಾಜರು ಆಚಾರ್ಯರ ಕಡೆ ತಿರುಗಿ ನೋಡಿದರು.

**ಆಚಾರ್ಯರು:** ಪೂಜ್ಯರೇ, ನಾನು ಬಡಬ್ರಾಹ್ಮಣನಾದರೂ ತಮ್ಮ ಅಮೋಘ ಕೃಪೆಯಿಂದ ನಾವು ದಂಪತಿಗಳು ವಂಚಿತರಾಗಿಲ್ಲ. ಗುರು ಕೃಪೆಯ ಮುಂದೆ ಆಸಂಪತ್ತು ಏನು ಮಾಡಬಲ್ಲದು, ನಮ್ಮನ್ನು ಆ ಪಾಪದ ಕೂಪಕ್ಕೆ ತಳ್ಳಬೇಡಿ" ಎಂದು ಪಾದಗಳನ್ನು ಹಿಡಿದುಕೊಂಡರು.

ಆಚಾರ್ಯರ ಈ ಅಚಲ ನಂಬಿಕೆಯನ್ನುಕಂಡು ಯತಿರಾಜರಿಗೆ ಬಹಳ ಸಂತೋಷವಾಯಿತು. ಕೂಡಲೇ ಪರಿಶುದ್ಧಹೃದಯವುಳ್ಳ ಭಕ್ತನನ್ನು ಅಪ್ಪಿಕೊಂಡರು.

**ಯತಿರಾಜರು:** ನಿನ್ನಂತಹ ಆಚಾರಹಿತನಾದ, ಶಾಂತಮೂರ್ತಿಯಾದ ಮಹಾತ್ಮನ ಸ್ಪರ್ಶದಿಂದ ನಾನು ಪರಿಶುದ್ಧನಾದೆ.

ಇಂತಹ ಸುಂದರ, ಅವರ್ಣನೀಯ ಸನ್ನಿವೇಶವನ್ನು ನೋಡಿದ ಶಿಷ್ಯರುಗಳು ನಾವೇ ಧನ್ಯರೆಂದು ಭಾವಿಸಿದರು. ಆಗ ಅವರೆಲ್ಲರಿಗೂ ಯತಿರಾಜರಲ್ಲಿರುವ ಅತ್ಯದ್ಭುತ ದೈವಿಕಶಕ್ತಿ ಎಂತಹುದೆಂಬುದು ಅರ್ಥವಾಯಿತು.

ಆ ವೇಳೆಗೆ ಸರಿಯಾಗಿ ಯಜ್ಞೇಶರು ಓಡೋಡಿ ಬಂದು ಗುರುಗಳ ಪಾದಗಳಿಗೆರಗಿ, ಪ್ರಾರ್ಥಿಸಿಕೊಂಡರು. ಯಜ್ಞೇಶರು "ಪೂಜ್ಯರೇ, ನನ್ನ ಮನೆಗೆ ಆಗಮಿಸುವಿರೆಂಬ ವಿಚಾರವನ್ನು ತಮ್ಮ ಶಿಷ್ಯರಿಂದ ಕೇಳಿ, ಆನಂದಭರಿತನಾಗಿ ತಮ್ಮನ್ನು ಆಹ್ವಾನಿಸಲು ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಂಡಿದ್ದೆ. ಆದರೆ ತಾವು ಬರಲು ನಿರಾಕರಿಸಿದ್ದಕ್ಕೆ ನಾನು ಮಾಡಿದ ಅಪರಾಧವೇನೆಂಬುದನ್ನು ಕೃಪೆಮಾಡಿ ತಿಳಿಸಿ".

**ಯತಿರಾಜರು:** ಮಗು, ನಿನ್ನ ಮನೆಗೆ ಬಾರದೆ ನಾವು ನಿನಗೆ ಅಪಮಾನ ಮಾಡಿದೆವೆಂದು ತಿಳಿಯಬೇಡ. ಆದರೆ ವೈಷ್ಣವ ಧರ್ಮವನ್ನು ನೀನು ಸರಿಯಾಗಿ ಪರಿಪಾಲಿಸಲಿಲ್ಲ. ವೈಷ್ಣವರ ಸೇವೆಯೇ ಪರಮಧರ್ಮ. ನೀನು ನಮ್ಮ ಶಿಷ್ಯರನ್ನು ವಿಚಾರಿಸದೇ ಕಳುಹಿಸಿದೆ. ಅಲ್ಲದೆ ಇಲ್ಲಿ ದೊರೆತ ಆತಿಥ್ಯ ಶ್ರೀಮಂತನಾದ ನಿನ್ನ ಮನೆಯಲ್ಲಿ ದೊರೆಯುತ್ತಿರಲಿಲ್ಲ. ಚಿಂತಿಸಬೇಡ. ನಾವು ಶ್ರೀ ಶೈಲದಿಂದ ಹಿಂದಿರುಗುವಾಗ ನಿಮ್ಮ ಮನೆಗೆ ಬರುತ್ತೇವೆ" ಎಂದು ಹೇಳಿ ಕಣ್ಣೀರಿಡುತ್ತಿದ್ದ ಯಜ್ಞೇಶರನ್ನು ಸಂತೈಸಿದರು. ಅಲ್ಲಿಂದ ಮುಂದೆ ಪ್ರಯಾಣ ಬೆಳೆಸಿದರು.

— ❋ —

## 19

# ಶ್ರೀ ಶೈಲದರ್ಶನ ಮತ್ತು ಗೋವಿಂದನ ಆಗಮನ

ಮರು ದಿನ ಬೆಳಗ್ಗೆ ಅಷ್ಟಸಹಸ್ರ ಗ್ರಾಮವನ್ನು ಬಿಟ್ಟು ಕಾಂಚೀಪುರದ ಕಡೆ ಪ್ರಯಾಣ ಮಾಡಿದರು. ಕಾಂಚೀಪುರವನ್ನು ತಲುಪಿ, ಅಲ್ಲಿಯ ಸ್ವಾಮಿ ವರದರಾಜನ ದರ್ಶನ ಪಡೆದರು. ಆ ವೇಳೆಗೆ ಕಾಂಚೀಪೂರ್ಣರೊಂದಿಗೆ ಸಮಾಗಮವಾಯಿತು. ಎಲ್ಲರೂ ಕೃತಾರ್ಥರಾದೆವೆಂದು ತಿಳಿದರು. ಅಲ್ಲಿ ಮೂರು ರಾತ್ರಿಗಳನ್ನು ಕಳೆದು ಪವಿತ್ರ ತೀರ್ಥದತ್ತ ಸಾಗಿದರು. ಅಲ್ಲಿ ಸ್ನಾನಾದಿಗಳನ್ನು ಮುಗಿಸಿಕೊಂಡು ಶ್ರೀ ಶೈಲದಡಿಗೆ ಬಂದರು.

ರಾಮಾನುಜರು ಈ ಪವಿತ್ರ ಹಾಗೂ ಬಹಳ ಸುಂದರ ಸ್ಥಳವನ್ನು ನೋಡಿದಾಗ ಅವರ ಕಣ್ಣುಗಳಿಂದ ಆನಂದಬಾಷ್ಪಗಳು ತಾನೇ ತಾನಾಗಿ ಸುರಿದವು. ಇದನ್ನು ಭೂ ವೈಕುಂಠವೆಂದು ಕರೆದರು. ಈ ಪವಿತ್ರ ಶೈಲದಲ್ಲಿಯೇ ಶ್ರೀ ಲಕ್ಷ್ಮೀ ನಾರಾಯಣರು ವಾಸಿಸುತ್ತಾರೆಂದು ತಿಳಿಸಿ "ನಾನು ಈ ಪಾಪಿದೇಹವನ್ನು ಹೊತ್ತು ಈ ಬೆಟ್ಟವನ್ನು ಹತ್ತಬಾರದು, ಅದರ ಪಾವಿತ್ರತೆಗೆ ಧಕ್ಕೆ ತರಬಾರದು" ಎಂದು ಹೇಳಿ ಬೆಟ್ಟದ ಬುಡದಲ್ಲೇ ಉಳಿದುಕೊಂಡರು.

ಆ ಪ್ರಾಂತದ ರಾಜ ವಿಟ್ಠಲದೇವನಿಗೆ ಯತಿರಾಜರು ಬಂದಿರುವ ಸುದ್ದಿ ತಿಳಿಯಿತು. ಆಗ ರಾಜ ತನ್ನ ಪರಿವಾರದೊಂದಿಗೆ ಯತಿರಾಜರ ದರ್ಶನಕ್ಕಾಗಿ ಅವರಿದಲ್ಲಿಗೆ ಬಂದ. ರಾಜನ ವಿನಯ ಸೌಜನ್ಯಗುಣಗಳನ್ನು ಕಂಡು ಯತಿರಾಜರು ಸಂತೋಷಪಟ್ಟರು. ಆತನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದರು.

ರಾಜನು ಗುರು ಕಾಣಿಕೆಯಾಗಿ **ವಿಳಮುಂಡಿಯ** ಎಂಬ ಭೂಮಿಯನ್ನು ಕೊಟ್ಟನು. ಯತಿರಾಜರು ಆ ಭೂಮಿಯನ್ನು ಬಡಬ್ರಾಹ್ಮಣರಿಗೆ ಹಂಚಿದರು.

ರಾಮಾನುಜರು ಈ ಕ್ಷೇತ್ರಕ್ಕೆ ಬಂದಿರುವ ವಿಷಯವನ್ನು ತಿಳಿದು ಶ್ರೀ ಶೈಲದ ಸಾಧು ಸಂತರೆಲ್ಲಾ ಒಟ್ಟುಗೂಡಿ ಅವರ ದರ್ಶನಕ್ಕಾಗಿ ಬಂದರು. ಅವರ ದಿವ್ಯದರ್ಶನ ಮಾಡಿ ಎಲ್ಲರೂ ಒಕ್ಕೊರಳಿನಿಂದ ಪ್ರಾರ್ಥಿಸಿದರು. "ಓ ಮಹಾತ್ಮರೇ, ಪರಮಪೂಜ್ಯರೇ, ತಾವೇ ಬೆಟ್ಟವನ್ನು ಹತ್ತಲು ನಿರಾಕರಿಸಿದರೆ, ಸಾಮಾನ್ಯ ಜನರ ಪಾಡೇನು? ಮೇಲೆ ಆ ಪರಮಾತ್ಮನ ಅರ್ಚನೆ ಮಾಡಿಕೊಂಡಿರುವ ಅರ್ಚಕರ ಗತಿಯೇನು? ತಮ್ಮಂತಹ ಮಹಾತ್ಮರ ಹೃದಯವೇ ಶ್ರೀ ಹರಿಯ ವಾಸಸ್ಥಾನ. ಹೀಗಿರುವಲ್ಲಿ ಸದ್ಭಕ್ತರಾದ ತಮ್ಮಂತಹವರು ಈ ಬೆಟ್ಟವನ್ನು ಹತ್ತಿದರೆ ಅದರ ಪಾವಿತ್ರತೆ ಇನ್ನೂ ಹೆಚ್ಚಾಗುತ್ತದೆಯೇ ಹೊರತು ಕುಂದುವುದಿಲ್ಲ, ತಾವು ಕೃಪೆ ಮಾಡಿ ಬೆಟ್ಟವನ್ನು ಹತ್ತಲೇಬೇಕೆಂದು ಅರಿಕೆ ಮಾಡಿಕೊಂಡರು".

ಇಂತಹ ಮಹಾತ್ಮರುಗಳ ವಿನಯ ಶೀಲ ಮಾತುಗಳನ್ನು ಆದೇಶಗಳೆಂದು ತಿಳಿದು ಬೆಟ್ಟವನ್ನು ಹತ್ತಲು ಉದ್ಯುಕ್ತರಾದರು.

ಬೆಟ್ಟವನ್ನೇರುವ ಸಮಯದಲ್ಲಿ ರಾಮಾನುಜರಿಗೆ ಹಸಿವು ತೃಷೆಗಳು ಹೆಚ್ಚಾದುವು. ಅದೇ ಸಮಯಕ್ಕೆ ಸರಿಯಾಗಿ ವಯೋವೃದ್ಧರೂ, ನಿರ್ಮಲಚಿತ್ತರೂ, ಪರಮಭಕ್ತರೂ ಆದ ಶೈಲಪೂರ್ಣರು ಬೆಟ್ಟದ ಮೇಲಿಂದ ಸ್ವಾಮಿಯ ಪ್ರಸಾದವನ್ನು, ಚರಣಾಮೃತವನ್ನೂ ತಂದು ಕೃಪೆಮಾಡಿ ತೆಗೆದುಕೊಳ್ಳುವಂತೆ ರಾಮಾನುಜರನ್ನು ಅರಿಕೆ ಮಾಡಿಕೊಂಡರು.

ಈ ವಯೋವೃದ್ಧ ಮಹಾತ್ಮರು ಬಹಳ ಶ್ರಮದಿಂದ ಅವರಲ್ಲಿಗೆ ಬಂದಿರುವುದನ್ನು ನೋಡಿ ರಾಮಾನುಜರು ಮಮ್ಮಲ ಮರುಗಿದರು.

**ರಾಮಾನುಜರು:** ಓ ಮಹಾತ್ಮ ತಮ್ಮ ಕೈಲಾಗದ ಈ ಕಾರ್ಯವನ್ನೇಕೆ ಮಾಡಿದಿರಿ. ತಮ್ಮಂತಹ ಪರಮಗುರುಗಳು ನನ್ನಂತಹ ಅಲ್ಪನಿಗೆ ಇಷ್ಟೊಂದು ತೊಂದರೆ ಪಡುವುದೇ? ಈ ಕೆಲಸವನ್ನು ತಾವು ಆಜ್ಞೆ ಮಾಡಿದ್ದರೆ ಯಾವನಾದರೂ ಒಬ್ಬ ಚಿಕ್ಕವನು ಮಾಡುತ್ತಿದ್ದನು".

**ಶೈಲಪೂರ್ಣರು:** ಯತಿಪತಿ, ನಾನೂ ಹಾಗೆಯೇ ಯೋಚಿಸಿದೆ. ಆದರೆ ನನಗಂತಹ ಚಿಕ್ಕವನು ಯಾರೂ ದೊರೆಯಲಿಲ್ಲ, ಆದ ಕಾರಣ ನಾನೇ ಹೊತ್ತು ತರಬೇಕಾಯಿತು.

**ರಾಮಾನುಜರು:** ಪೂಜ್ಯರೇ, ತಮ್ಮ ದೈನ್ಯಭಾವ ನನ್ನ ಒಳಕಣ್ಣನ್ನು ತೆರೆಸಿತು. ದೈನ್ಯಭಾವ್ಯ ಎಂತಹುದೆಂಬುದು ನನಗೆ ತಮ್ಮಿಂದ ಅರ್ಥವಾಯಿತು.

ಹೀಗೆಂದು ಹೇಳಿ ರಾಮಾನುಜರು ಭಕ್ತಿಪೂರ್ವಕವಾಗಿ ಪರಿಪೂರ್ಣರಾದ ಆ ಪೂರ್ಣರ ಪಾದಗಳಿಗೆರಗಿದರು. ನಂತರ ಶಿಷ್ಯರೊಡಗೂಡಿ ಪ್ರಸಾದವನ್ನು ತೆಗೆದುಕೊಂಡರು. ಶ್ರಮವು ದೂರವಾಯಿತು.

ಸ್ವಲ್ಪ ದೂರ ಮೇಲೆ ಹತ್ತುತ್ತಲೇ ಶ್ರೀ ರಮಣ ವೇಂಕಟನಾಥನ ದೇವಸ್ಥಾನದ ಮುಂಭಾಗಕ್ಕೆ ಬಂದರು.

ಅವರ ಶಿಷ್ಯರಲ್ಲೊಬ್ಬರಾದ ಅನಂತಾಚಾರ್ಯರು ಬೆಟ್ಟದಲ್ಲೇ ವಾಸವಾಗಿದ್ದವರು, ಬಂದು ಅವರ ಪಾದಗಳಿಗೆರಗಿದರು. ರಾಮಾನುಜರಿಗೆ ತಮ್ಮ ಶಿಷ್ಯರನ್ನು ನೋಡಿ ಬಹಳ ಸಂತೋಷವಾಯಿತು.

ನಂತರ ದೇವಸ್ಥಾನದ ಸುತ್ತಲೂ ಶ್ರೀ ವೇಂಕಟೇಶ್ವರನ ಗುಣಗಾನ ಮಾಡುತ್ತಾ ಪ್ರದಕ್ಷಿಣೆ ಹಾಕತೊಡಗಿದರು.

**ರಾಗ-ಸಿಂಧುಭೈರವಿ** **ಏಕತಾಳ**

ತಿರುಪತಿವೇಂಕಟರಮಣನಿನ । ಗೇತಕೆಬಾರದು ಕರುಣ ॥ಪ॥
ನಂಬಿದೆ ನಿನ್ನಯಚರಣ । ಪರಿಪಾಲಿಸಬೇಕೋ ಕರುಣ ॥ಅ॥

ಆಳಗಿರಿಯಿಂದಲಿ ಬಂದಸ್ವಾಮಿ । ಅಂಜನಗಿರಿಯಲಿನಿಂದ ।
ಕೊಳಲು ಧ್ವನಿಯೂದೋ ಚಂದ । ನಮ್ಮ ಕುಂಡಲರಾಯಮುಕುಂದ ॥

ಮೂಡಲಗಿರಿಯಲಿನಿಂತ ಮುದ್ದು । ವೆಂಕಟಪತಿಬಲವಂತ ।
ಈಡಿಲ್ಲ ನಿನಗೆ ಶ್ರೀಕಾಂತ । ಈರೇಳು ಲೋಕಕನಂತ ॥

ಎಲ್ಲಾದೇವರ ಗಂಡ ಅವ । ಚಿಲ್ಲರೆ ದೈವದ ಮಿಂಡ ।
ಬಲ್ಲಿದವರಿಗೆ ಉದ್ದಂಡ ಶಿವ ಬಿಲ್ಲುಮುರಿದ ಪ್ರಚಂಡ ॥

ದಾಸರ ಕಂಡರೆಪ್ರಾಣ ತಾ । ಧರೆಯೊಳಗಧಿಕ ಪ್ರವೀಣ ।
ದ್ವೇಷಿಯಗಂಟಲಗಾಣ ನಮ್ಮ । ದೇವಗೆ ನಿತ್ಯ ಕಲ್ಯಾಣ ॥

ಪಾಪವಿನಾಶಿನಿಸ್ನಾನ ಹರಿ । ಪಾದೋದಕವೇಪಾನ ।
ಕೋಪತಾಪಗಳ ನಿಧಾನ ನಮ್ಮ । ಪುರಂದರ ವಿಠಲನ ಧ್ಯಾನ ॥

ಹೀಗೆ ಆನಂದ ಭರಿತರಾಗಿ ಪ್ರದಕ್ಷಿಣೆ ಹಾಕಿ ದೇವಸ್ಥಾನದೊಳಕ್ಕೆ ಶ್ರೀ ವೆಂಕಟನಾಥನ ದರ್ಶನ ಪಡೆಯಲು ಹೋದರು. ಸ್ವಾಮಿಯ ದರ್ಶನ ಮಾಡುತ್ತಲೇ ಪ್ರೇಮೋದ್ರಿಕ್ತರಾಗಿ ಸ್ವಾಮಿಯನ್ನೇ ನೋಡುತ್ತಾ ಮೈಮರೆತರು. ಅವರ ನಿಶ್ಚಲ ಮನಸ್ಸು ಸ್ವಾಮಿಯ ಪಾದಗಳಲ್ಲಿ ಲೀನವಾಯಿತು.

ದೀರ್ಘಕಾಲದ ನಂತರ ಎಚ್ಚೆತ್ತರು. ಅರ್ಚಕರಿಂದ ತೀರ್ಥ ಪ್ರಸಾದವನ್ನು ಸ್ವೀಕರಿಸಿದರು. ಮೂರು ರಾತ್ರಿ ಸ್ವಾಮಿಯ ಸನ್ನಿಧಿಯಲ್ಲೇ ತಂಗಿದರು.

ಅದೇ ಸಮಯದಲ್ಲಿ ಶೈಲಪೂರ್ಣರ ಶಿಷ್ಯನೂ ರಾಮಾನುಜರ ತಮ್ಮನೂ ಆದ ಗೋವಿಂದನು ಬಂದು ಅವರನ್ನು ಸೇರಿದನು. ಅವನನ್ನು ನೋಡಿ ರಾಮಾನುಜರು ಬಹಳ ಸಂತೋಷಪಟ್ಟರು.

ಶೈಲಪೂರ್ಣರ ಒತ್ತಾಯದ ಮೇಲೆ ರಾಮಾನುಜರು ಅವರ ಮನೆಯಲ್ಲಿ ಒಂದು ವರ್ಷ ತಂಗಿದರು. ಪೂರ್ಣರ ನೇತೃತ್ವದಲ್ಲಿ ರಾಮಾನುಜರು ರಾಮಾಯಣ ಪಠನ ಮಾಡಿದರು. ಅದಕ್ಕೆ ಸುಂದರ ವ್ಯಾಖ್ಯಾನವನ್ನೂ ಕಲಿತರು.

ಒಮ್ಮೆ ಗೋವಿಂದ ತನ್ನ ಗುರುಗಳಿಗೆ ಹಾಸಿಗೆ ಅಣಿ ಮಾಡಿ ತಾನೇ ಅದರ ಮೇಲೆ ಮಲಗಿ ನೋಡಿದ.ಇದನ್ನು ಗಮನಿಸಿದ ರಾಮಾನುಜರು ಚಕಿತರಾದರು ಹಾಗೂ ದುಃಖಿತರಾದರು. ವಿಷಯವನ್ನು ಶೈಲಪೂರ್ಣರಿಗೆ ತಿಳಿಸಿದರು.

**ಶೈಲಪೂರ್ಣರು:** ಗೋವಿಂದ ನೀನು ಗುರುಗಳ ಹಾಸಿಗೆಯ ಮೇಲೆ ಮಲಗಬಹುದೆ? ಇದರ ಪ್ರತಿಫಲವೇನೆಂಬುದು ನಿನಗೆ ತಿಳಿದಿದೆಯೇ?

**ಗೋವಿಂದ:** ಗೊತ್ತಿದೆ. ಗುರುವರ್ಯಾ, ಶಿಷ್ಯನಾದವನು ಗುರುಗಳ ಹಾಸಿಗೆಯ ಮೇಲೆ ಮಲಗಿದರೆ ಅವನಿಗೆ ಶಾಶ್ವತ ನರಕಯಾತನೆ ದೊರಕುತ್ತದೆ.

**ಶೈಲಪೂರ್ಣರು:** ಮತ್ತೆ ತಿಳಿದೂ ತಿಳಿದು ಹೀಗೇಕೆ ಮಾಡಿದೆ? ತಿಳಿದೂ ತಪ್ಪು ಮಾಡಿದರೆ ಶಿಕ್ಷೆ ಇನ್ನೂ ಹೆಚ್ಚುತ್ತದೆ.

**ಗೋವಿಂದ:** ನಾನು ಹಾಸಿದ ಹಾಸಿಗೆ ಒತ್ತದೆ ಸರಿಯಾಗಿದೆಯೋ ಎಂದು ಪರೀಕ್ಷಿಸಲೋಸುಗ ಹಾಗೆ ಮಾಡಿದೆ. ಇದರ ಮೇಲೆ ನಾನು ನರಕಕ್ಕೆ ಹೋಗಲು ಸಿದ್ಧನಿದ್ದೇನೆ. ಆದರೆ ಗುರುಗಳು ಯಾವ ತೊಂದರೆಯೂ ಇಲ್ಲದಂತೆ ಈ ಹಾಸಿಗೆಯ ಮೇಲೆ ಸುಖನಿದ್ರೆ ಮಾಡಿದರೆ ಅದೇ ನನ್ನ ಪುಣ್ಯ.

ರಾಮಾನುಜರು ಗೋವಿಂದನ ಈ ಮಾತುಗಳನ್ನು ಕೇಳಿದ ಮೇಲೆ ಅವನ ಕ್ಷಮೆಯಾಚಿಸಿದರು.

ಮತ್ತೊಂದು ದಿನ ಇಂತಹದೇ ಪ್ರಸಂಗ ನಡೆಯಿತು. ಒಂದು ದಿನ ಗೋವಿಂದನು ಒಂದು ಹಾವನ್ನು ಹಿಡಿದುಕೊಂಡು ಅದರ ಗಂಟಲಿಗೆ ತನ್ನ ಬೆರಳನ್ನು ಪದೇ ಪದೇ

ತುರುಕುತ್ತಿದ್ದನು. ಹಾವು ಸಾಯುವಂತಾಯಿತು. ಆಗ ಅವನ್ನು ಬಿಟ್ಟು ಸ್ನಾನ ಮಾಡಿ ರಾಮಾನುಜರ ಬಳಿ ಬಂದನು.

ಗೋವಿಂದನು ಆ ಹಾವಿಗೆ ಕೊಡುತ್ತಿದ್ದ ಹಿಂಸೆಯನ್ನು ನೋಡಿ,

**ರಾಮಾನುಜರು:** ಗೋವಿಂದ, ಆ ಮೂಕಪ್ರಾಣಿ ಹಾವನ್ನು ಆ ರೀತಿ ಹಿಂಸಿಸ ಬಾರದಾಗಿತ್ತು. ಅದು ಒಂದು ವೇಳೆ ಕಚ್ಚಿದ್ದರೆ ನಿನ್ನ ಪ್ರಾಣಕ್ಕೆ ಸಂಚಕಾರ ಬರುತ್ತಿತ್ತು. ಪ್ರಾಣಿಗಳನ್ನು ಹೀಗೆ ಹಿಂಸಿಸುವುದು ಸರಿಯೇ?

**ಗೋವಿಂದ:** ಅಣ್ಣಾ! ಆ ಹಾವು ಏನನ್ನೋತಿನ್ನುತ್ತಿದ್ದಾಗ ಅದರ ಗಂಟಲಿಗೆ ಒಂದು ಮುಳ್ಳುಚುಚ್ಚಿಕೊಂಡಿತ್ತು. ಅದಕ್ಕೆ ಅದು ನೋವಿನಿಂದ ಒದ್ದಾಡುತ್ತಿತ್ತು. ಅದನ್ನು ಕಂಡ ನಾನು ಅದರ ಗಂಟಲಿಗೆ ಚುಚ್ಚಿಕೊಂಡಿದ್ದ ಮುಳ್ಳನ್ನು ತೆಗೆದೆ. ಆದ್ದರಿಂದ ಅದು ನೋವಿನಿಂದ ಹಾಗೆ ಸತ್ತ ಹಾಗೆ ಮಲಗಿತ್ತು ಅಷ್ಟೇ.

ರಾಮಾನುಜರಿಗೆ ಈ ಮಾತುಗಳನ್ನು ಕೇಳಿ ಅವನ ಮೇಲೆ ಮತ್ತಷ್ಟು ಪ್ರೇಮ ಉಂಟಾಯಿತು. ಈತನಲ್ಲಿದ್ದ ಪ್ರಾಣಿದಯೆಯನ್ನು ಕಂಡು ಸಂತೋಷಪಟ್ಟರು.

ರಾಮಾನುಜರು ರಾಮಾಯಣದ ಅಧ್ಯಯನವನ್ನು ಮುಗಿಸಿ, ತನ್ನ ಗುರುಗಳಾದ ಶೈಲಪೂರ್ಣರಿಗೆ ಏನಾದರೂ ಗುರುಕಾಣಿಕೆ ಅರ್ಪಿಸಿ ಹೋಗಬೇಕೆಂದಿದ್ದರೆ, ಶೈಲಪೂರ್ಣರೇ ರಾಮಾನುಜರನ್ನು ಪ್ರಶ್ನಿಸಿದರು.

**ಶೈಲಪೂರ್ಣರು:** ಮಗು ರಾಮಾನುಜ, ನಿನ್ನದೇನಾದರೂ ಕೋರಿಕೆಯಿದ್ದರೆ ತಿಳಿಸು, ನಾನು ಅದನ್ನು ಈಡೇರಿಸುತ್ತೇನೆ. ಆದರೆ ಅದು ನನ್ನ ಸಾಮರ್ಥ್ಯವನ್ನು ಮೀರಿದ್ದಾಗಿರ ಬಾರದು.

**ರಾಮಾನುಜರು:** ಓ ಮಹಾತ್ಮಾ ತಮ್ಮ ದೈವಿಕ ಶಿಷ್ಯನಾದ ಗೋವಿಂದನನ್ನು ತಾವು ನನಗೆ ಒಪ್ಪಿಸಿದರೆ ಸಾಕು. ಇದೇ ತಮ್ಮಲ್ಲಿ ನನ್ನ ಪ್ರಾರ್ಥನೆ.

ಪೂರ್ಣರು ಕೂಡಲೇ ಗೋವಿಂದನನ್ನು ರಾಮಾನುಜರಿಗೆ ಒಪ್ಪಸಿದ್ದೇನೆಂದು ತಿಳಿಸಿದರು.

ರಾಮಾನುಜರಿಗೆ ತಮ್ಮಿಂದ ದೂರವಾಗಿದ್ದ ಗೋವಿಂದನನ್ನು ಮತ್ತೆ ಪಡೆದು ಅಪಾರ ಹರ್ಷವುಂಟಾಯಿತು.

ತಡಮಾಡದೆ ರಾಮಾನುಜರು ತಮ್ಮ ಶಿಷ್ಯರು ಹಾಗೂ ಗೋವಿಂದನೊಡಗೂಡಿ ಅಲ್ಲಿಂದ ಹೊರಟು ಶೋಲಿಂಗರ್ (ಚೋಳಸಿಂಹಪುರ) ಸೇರಿದರು. ಅಲ್ಲಿಯ ಸ್ವಾಮಿ ನೃಸಿಂಹ ದೇವನ ದರ್ಶನ ಪಡೆದು ಭಕ್ತಿಯಿಂದ ಸ್ತುತಿಸಿ,

ರಾಗ-ಶಂಕರಾಭರಣ ಆದಿತಾಳ

,ನರಸಿಂಹನಪಾದಭಜನೆಯ ಮಾಡೋ ||ಪ||
,ನರಸಿಂಹನಪಾದಭಜನೆಯ ಮಾಡಲು |
,ದುರಿತಪರ್ವತವಖಿಂ | ಡಿಸುವಕುಲಿಶದಂತೆ ||ಅ||
,ತರಳನಮೊರೆಕೇಳಿ | ತ್ವರಿತದಿಂದಲಿಬಂದು |
,ದುರಳನ ಕರುಳತನ್ನ | ಕೊರಳಲಿಧರಿಸಿದ ||೧||

ಸುರರೆಲ್ಲನಡುಗಲು | ಸಿರಿದೇವಿಮೊರೆಯಿಡೆ ||
ವರಕಂಭದಿಂಬಂದ | ಸಿರಿನರಹರಿ ನಮ್ಮ ||೨||

ಹರಿವಿರಿಂಚಾದ್ಯರು | ಕರವೆತ್ತಿ ಮುಗಿಯಲು ||
ಪರಮಶಾಂತನಾದಶ್ರೀ | ಪುರಂದರವಿಠಲ ||೩||

ಕಾಂಚೀಪುರವನ್ನು ಸೇರಿದರು. ಶ್ರೀ ವರದರಾಜನ ದರ್ಶನ ಪಡೆದು ರಾಮಾನುಜರು ಕಾಂಚೀಪೂರ್ಣರಲ್ಲಿಗೆ ಹೋದರು. ಅವರಲ್ಲಿ ಗೋವಿಂದನ ಗುಣವರ್ಣನೆ ಮಾಡಿದರು. ಅವನನ್ನು ಆಶೀರ್ವದಿಸಿ ಎಂದು ಕೇಳಿಕೊಂಡರು.

ಕಾಂಚೀಪೂರ್ಣರು ಗೋವಿಂದನನ್ನು ಆಶೀರ್ವದಿಸಿದರು. ಆದರೆ ಅವನ ಮುಖಬಾಡಿತ್ತು. ಇದನ್ನು ನೋಡಿದ ಕಾಂಚೀಪೂರ್ಣರು ರಾಮಾನುಜರಿಗೆ ತಿಳಿಸಿದರು – "ಯತಿರಾಜ, ಇವನನ್ನು ಮತ್ತೆ ಶ್ರೀ ಶೈಲಪೂರ್ಣರ ಬಳಿಗೆ ಕಳುಹಿಸುವುದೇ ಉತ್ತಮ. ಗೋವಿಂದನ ಮುಖ ಅವರಿಂದ ದೂರವಾದ್ದಕ್ಕೆ ಬಾಡಿ ಕಂದಿ ಹೋಗಿದೆ".

ಕಾಂಚೀಪೂರ್ಣರ ಮಾತಿನಂತೆ ಗೋವಿಂದನನ್ನು ರಾಮಾನುಜರು ಹಿಂದಕ್ಕೆ ಕಳುಹಿಸಿಕೊಟ್ಟರು.

ಗೋವಿಂದನು ಸಂತೋಷದಿಂದ ತನ್ನ ಗುರುಗಳ ಮನೆ ಸೇರಿದನು. ಆದರೆ ಶೈಲಪೂರ್ಣರು ಆತನನ್ನು ಮಾತನಾಡಿಸಲಿಲ್ಲ. ಕಣ್ಣೆತ್ತಿ ನೋಡಲೂ ಇಲ್ಲ. ಗುರುಗಳು ಮಾತನಾಡಿಸದೇ ಹೋದ ಮೇಲೆ ಊಟವನ್ನು ಮಾಡದೆ ಗೋವಿಂದನು ಮೂರು ದಿನಗಳನ್ನು ಕಳೆದನು.

ಶೈಲಪೂರ್ಣರ ಹೆಂಡತಿಗೆ ಗೋವಿಂದನನ್ನು ನೋಡಿ ಬಹಳ ದುಃಖವಾಯಿತು. ಶೈಲಪೂರ್ಣರನ್ನು ಕೇಳಿಕೊಂಡಳು. "ಮಗು, ಗೋವಿಂದ, ಮೂರು ದಿನಗಳಿಂದ ಉಪವಾಸ.

ನೀವು ಅವನನ್ನು ಮಾತನಾಡಿಸದಿದ್ದರೂ ಚಿಂತೆಯಿಲ್ಲ, ಊಟ ಮಾಡೆಂದು ತಿಳಿಸಿ" ಎಂದಳು. ಅದಕ್ಕೆ ಶೈಲಪೂರ್ಣರು ಉತ್ತರಿಸಿದರು. "ನನಗೂ ಅವನಿಗೂ ಈಗ ಯಾವ ಸಂಬಂಧವೂ ಇಲ್ಲ. ಅವನು ಬೇರೆಯವರಿಗೆ ಮಾರಿದ ಕುದುರೆಯಂತೆ. ತನ್ನ ಹೊಸ ಯಜಮಾನನ ಹತ್ತಿರವೇ ಹೋಗಬೇಕೆಂದರು".

ಈ ಮಾತುಗಳನ್ನು ಕೇಳಿದ ಕೂಡಲೆ ಗೋವಿಂದನು ಕಾಂಚೀಪುರಕ್ಕೆ ಬಂದು ರಾಮಾನುಜರ ಪಾದಗಳನ್ನು ಹಿಡಿದು ಕೇಳಿಕೊಂಡನು "ಯತಿರಾಜ, ನನ್ನನ್ನು ತಮ್ಮ ತಮ್ಮನೆಂದು ಕರೆಯಬೇಡಿ. ನನ್ನ ಹಿಂದಿನ ಗುರುಗಳು ತಮಗೆ ನನ್ನನ್ನು ಒಪ್ಪಿಸಿ ಬಿಟ್ಟಿದ್ದಾರೆ. ಈಗ ನೀವೇ ನನ್ನ ಗುರು. ನಿಮ್ಮಾಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತೇನೆ".

ನಿದ್ರಾಹಾರವಿಲ್ಲದೆ ಬಂದಿದ್ದ ಗೋವಿಂದನನ್ನು ಪ್ರೀತಿಯಿಂದ ಸ್ನಾನಮಾಡಿ, ಊಟ ಮಾಡುವಂತೆ ತಿಳಿಸಿದರು. ನಂತರ ಎಲ್ಲರೂ ಕಾಂಚೀಪುರವನ್ನು ಬಿಟ್ಟು, ಅಷ್ಟಸಹಸ್ರ ಗ್ರಾಮಕ್ಕೆ ಹೋಗಿ ಯಜ್ಞೇಶರ ಅತಿಥಿಗಳಾಗಿ ಒಂದು ರಾತ್ರಿ ತಂಗಿದ್ದು ಶ್ರೀರಂಗವನ್ನು ಸೇರಿದರು. ಶ್ರೀರಂಗನಾಥನ ದರ್ಶನ ಪಡೆದು, ಗುರುಗಳ ದರ್ಶನ ಪಡೆದು, ಮಠಕ್ಕೆ ಹಿಂದಿರುಗಿದರು.

— ❋ —

# 20

# ಗೋವಿಂದರ ಸನ್ಯಾಸ ಸ್ವೀಕಾರ

ತನ್ನ ಮಾವನವರಿಂದ ದೂರನಾದ ಗೋವಿಂದ ಸ್ವಲ್ಪವೂ ವ್ಯಥೆಪಡಲಿಲ್ಲ.

ಒಂದೆರಡು ದಿನಗಳಲ್ಲೇ ಯತಿರಾಜರಿಗೆ ಬೇಕಾದ ಎಲ್ಲಾ ಸೌಕಾರ್ಯಗಳನ್ನು ಒದಗಿಸುತ್ತಾ ಅವರ ಸೇವೆ ಮಾಡುತ್ತಿದ್ದನು.

"ನಿನ್ನಲ್ಲಿ ಒಳ್ಳೆ ಸೇವಾಮನೋಭಾವವಿದೆ" ಎಂದು ಇತರೆ ಶಿಷ್ಯರು ಅತನನ್ನು ಹೊಗಳಿದರು.

"ಅದು ಸಹಜ" ಎಂದು ಗೋವಿಂದನು ಉತ್ತರಿಸಿದನು.

ಇದನ್ನು ಆ ಶಿಷ್ಯರುಗಳು ಅಹಂಕಾರವೆಂದು ಪರಿಗಣಿಸಿದರು. ಈ ವಿಷಯ ರಾಮಾನುಜರನ್ನು ಮುಟ್ಟಿತು.

**ರಾಮಾನುಜರು:** ಮಗು, ಅವರೆಲ್ಲಾ ನಿನ್ನನ್ನು ಹೊಗಳುತ್ತಾರೆ. ಅದ್ದರಿಂದ ನೀನು ಅಹಂಕಾರಿಯಾದೆಯಾ ?

**ಗೋವಿಂದ:** "ಮಹಾನುಭಾವ 324 ಲಕ್ಷ ಹುಟ್ಟು, ಸಾವುಗಳ ನಂತರ ಈ ಪ್ರಾಣಿ, ಮಾನವ ಜೀವಿಯಾದ. ಇದರಲ್ಲೂ ಅನೇಕ ಜನ್ಮಗಳು ಕಳೆದವು. ತಮ್ಮ ಕೃಪಾಕಟಾಕ್ಷ ಸಿಗಲಾಗಿ ನನಗೆ ಮುಕ್ತಿ ದೊರಕುವಂತಾಯಿತು. ನನ್ನಲ್ಲಿ ಏನೇ ಒಳ್ಳೆಯ ಗುಣಗಳಿದ್ದಾಗ್ಯೂ ಅವೆಲ್ಲವೂ ತಮ್ಮಿಂದಲೇ ಲಭ್ಯವಾದವು. ನನಗೆ ದೊರೆತಿರುವ ಹೊಗಳಿಕೆಗಳು ತಮ್ಮವೇ ಹೊರತು ನನ್ನವಲ್ಲ". ಅದ್ದರಿಂದ ನಾನು ಅವರಿಗೆ ಹಾಗೆ ಉತ್ತರಕೊಟ್ಟೆ.

ಮತ್ತೊಂದು ದಿನ ಬೆಳಗ್ಗೆ ತನ್ನ ಆನ್ಹಿಕಗಳನ್ನೆಲ್ಲಾ ಬಿಟ್ಟು ಒಬ್ಬಳು ಸೂಳೆಯ ಮನೆಯ ಬಾಗಿಲಲ್ಲಿ ಕುಳಿತಿದ್ದ. ಈ ವಿಚಾರವೂ ಸಹ ರಾಮಾನುಜರ ಕಿವಿಗೆ ಬಿತ್ತು.

**ರಾಮಾನುಜರು:** ನೀನು ಸೂಳೆಯ ಮನೆಯ ಬಾಗಿಲಲ್ಲಿ ಕುಳಿತಿದ್ದೆಯೇಕೆ?

**ಗೋವಿಂದ:** ಪೂಜ್ಯರೇ, ಆ ಹೆಂಗಸು ರಾಮಾಯಣದ ಗೀತೆಗಳನ್ನು ಹಾಡುತ್ತಿದ್ದಳು. ಅವುಗಳನ್ನು ಕೇಳುತ್ತಾ ಕುಳಿತಿದ್ದೆ.

ಒಂದು ದಿನ ಶೈಲಪೂರ್ಣರ ತಂಗಿ, ಗೋವಿಂದನ ತಾಯಿ ದ್ಯುತಿಮತಿ ಬಂದು ತನ್ನ ಮಗನ ಮೇಲೆ ರಾಮಾನುಜರಿಗೆ ದೂರಿತ್ತಳು "ಗೋವಿಂದ ತನ್ನ ಹೆಂಡತಿಯನ್ನು ವಿಚಾರಿಸುತ್ತಿಲ್ಲ".

**ರಾಮಾನುಜರು:** ಮಗು ಗೋವಿಂದ, ತಮೋಗುಣ ದೂರವಾದ ಮೇಲೆ ನೀನು ನಿನ್ನ ಹೆಂಡತಿಯೊಂದಿಗೆ ಇರು. ಇದು ಗುರುವಿನಾಜ್ಞೆ.

ಗುರುವಿನಾಜ್ಞೆಯಂತೆ ಗೋವಿಂದ ತನ್ನ ಪತ್ನಿಯೊಡನೆ ಕಾಲ ಕಳೆದನು. ಹೇಗೆ? ಕೇವಲ ಪಾರಲೌಕಿಕ ಮಾತುಗಳನ್ನಾಡುತ್ತಾ ಕಳೆದನು.

ರಾಮಾನುಜರು ಗೋವಿಂದನನ್ನು ಪ್ರಶ್ನಿಸಿದರು. "ಈಗ ನಿನ್ನ ಪತ್ನಿಯೊಂದಿಗೆ ನಿನ್ನ ವರ್ತನೆ ಹೇಗಿದೆ?".

ಗೋವಿಂದನು ಉತ್ತರಿಸಿದನು – "ನನ್ನಲ್ಲಿದ್ದ ತಮೋಗುಣ ವರ್ಜಿತವಾದ ಮೇಲೆ ಅಂತರ್ಯಾಮಿಯೇ ನನ್ನ ಹೃದಯದಲ್ಲಿ ನೆಲಸಿರುವನು. ಮನೋವಿಕಾರಕ್ಕೆ ಅವಕಾಶವೇ ಇಲ್ಲ".

ರಾಮಾನುಜರು ಆತನ ಸ್ಥಿರಮನಸ್ಸನ್ನು ಕಂಡು ಕೂಡಲೇ ಸನ್ಯಾಸವನ್ನು ಸ್ವೀಕರಿಸು ಎಂದು ಆಜ್ಞಾಪಿಸಿದರು.

ಗೋವಿಂದರು ತಾಯಿಯ ಅನುಮತಿ ಪಡೆದು ಸನ್ಯಾಸ ದೀಕ್ಷೆ ಪಡೆಯಲು ರಾಮಾನುಜರಲ್ಲಿಗೆ ಬಂದರು.

ರಾಮಾನುಜರು ಗೋವಿಂದರಿಗೆ ಪಂಚಸಂಸ್ಕಾರ ಮಾಡಿ, ತ್ರಿದಂಡ, ಕಮಂಡಲುಗಳನ್ನು ಕೊಟ್ಟು ಪರಮಹಂಸ ಸ್ಥಾನಕ್ಕೆ ಏರಿಸಿದರು. ಗೋವಿಂದರಿಗೆ ರಾಮಾನುಜರು ತಮ್ಮ ಶಿಷ್ಯರು ತಮಗೆ ಇಟ್ಟ 'ಮನ್ನಾಥ' (ಎಂಬೆರುಮಾನಾರ್) ಎಂಬ ಹೆಸರನ್ನೇ ಕೊಟ್ಟರು.

ಆದರೆ ಗೋವಿಂದರು ಗುರುಗಳ ಹೆಸರು ಬೇಡವೆಂದು ನಿರಾಕರಿಸಿದರು. ಆಗ ರಾಮಾನುಜರು ಅವರನ್ನು '**ಎಂಬಾರ್**' ಎಂದು ಕರೆದರು.

ಆಗ ಗೋವಿಂದರು ತನ್ನನ್ನು ಉದ್ಧರಿಸಿದ ಯತಿರಾಜರ ಮಹಿಮೆಯನ್ನು ಕೊಂಡಾಡುತ್ತಾ ಅವರ ಸುತ್ತಲೂ ಕುಣಿದಾಡಿದರು.

**ರಾಗ-ಕಲ್ಯಾಣಿ** **ಆದಿತಾಳ**

,ನಾನಾಜನ್ಮಗಳ । ಕಳೆದು ಬಂದೆನು ನಾನು ।
,ನಿನ್ನಂಥಗುರುವು । ದೊರೆಯಲಿಲ್ಲವೋ ಹಿಂದೆ ॥ಪ॥
,ನನ್ನೀಜನ್ಮದಿ । ನೀನೆನ್ನ ಗುರುವಾಗಿ ।
,ಜ್ಞಾನವಬೋಧಿಸಿ । ಯತಿಯನ್ನಾಗಿಸಿದೆ ॥೧॥

,ಜಗದ ಬಂಧಂಗಳ । ದೂರಸಲ್ಲಿಸಿ ಎನ್ನ ।
,ಖಗವಾಹನನ । ದಾಸನನ್ನಾಗಿಸಿದೆ ॥
,ಜಗದಯತಿಗಳಿಗೆಲ್ಲ । ಯತಿರಾಜ ನೆನಿಸಿನೀ ।
,ಸುಗಮದಿಮುಕ್ತಿಯ । ಮಾರ್ಗವ ತೋರಿದೆ ॥೨॥

ರಾಮಾನುಜರು ಜಗನ್ನಾಥ ಕ್ಷೇತ್ರದಲ್ಲಿ ಒಂದು ಮಠವನ್ನು ಕಟ್ಟಿಸಿ '**ಎಂಬಾರ್ ಮಠ**'ವೆಂದೇ ನಾಮಕರಣ ಮಾಡಿದರು.

ಹೀಗೆ ರಾಮಾನುಜರು ತಮ್ಮ ಶಿಷ್ಯರೊಂದಿಗೆ ಅದರಲ್ಲೂ ಮುಖ್ಯ ಶಿಷ್ಯರುಗಳಾದ ದಾಶರಥಿಗಳು, ಕೂರೇಶರು, ಸುಂದರಬಾಹುಗಳು, ಚೊಟ್ಟೈನಂಬಿಗಳು, ಸೌಮ್ಯ ನಾರಾಯಣರು, ಯಜ್ಞಮೂರ್ತಿಗಳು, ಗೋವಿಂದರು(ಎಂಬಾರ್) ಮೊದಲಾದವರೊಂದಿಗೆ ತಮ್ಮ ಮಠದಲ್ಲಿ ಕೆಲಕಾಲ ಆನಂದವಾಗಿ ಕಾಳ ಕಳೆದರು.

— ❋ —

# 21

# ಶ್ರೀಭಾಷ್ಯಗ್ರಂಥ - ರಚನೆ

ಒಂದು ದಿನ ರಾಮಾನುಜರು ಯಾಮುನಾಚಾರ್ಯರ ಗುಣಗಾನವನ್ನು ತಮ್ಮ ಶಿಷ್ಯರ ಮಧ್ಯೆ ಮಾಡುತ್ತಿದ್ದಾಗ, ಸ್ಮಶಾನದಲ್ಲಿ ಯಾಮುನಾಚಾರ್ಯರ ಶವದ ಮುಂದೆ ಮಾಡಿದ್ದ ಮೂರು ಶಪಥಗಳು ರಾಮಾನುಜರ ನೆನಪಿಗೆ ಬಂದವು. ಆ ಶಪಥಗಳಲ್ಲಿ **ಶ್ರೀ ಭಾಷ್ಯ** ರಚನೆಯೂ ಒಂದಾಗಿತ್ತು. ಆದರೆ ಇಲ್ಲಿಯವರೆವಿಗೂ ಅದನ್ನು ಬರೆಯಲು ಸಾಧ್ಯವಾಗಿರಲಿಲ್ಲ.

ಈಗ ತಮ್ಮ ಶಿಷ್ಯರಿಗೆ ಹೇಳಿದರು – "ನಾನು ಯಾಮುನ ಮುನಿಗಳಿಗೆ ಕೊಟ್ಟ ವಚನದ ಪ್ರಕಾರ ಶ್ರೀ ಭಾಷ್ಯವನ್ನು ರಚಿಸಲೇಬೇಕಾಗಿದೆ. ಅದನ್ನು ರಚಿಸಲು **'ಬೋಧಾಯನವೃತ್ತಿ'** ಗ್ರಂಥದ ಸಹಾಯ ಬೇಕಾಗಿದೆ. ಅದರ ಒಂದು ಪ್ರತಿ ಕಾಶ್ಮೀರದಲ್ಲಿ ಶಾರದಾಪೀಠದಲ್ಲಿ ದೊರೆಯುವುದೆಂದು ತಿಳಿದು ಬಂದಿದೆ. ಈ ದಿನವೇ ಕೂರೇಶನನ್ನು ಜೊತೆಗೆ ಕರೆದುಕೊಂಡು ಕಾಶ್ಮೀರಕ್ಕೆ ಪ್ರಯಾಣ ಬೆಳೆಸುತ್ತೇನೆ. ಸ್ವಾಮಿ ಭಕ್ತರಾದ ನೀವುಗಳು ಆ ಗ್ರಂಥ ಶೋಧನೆಯಲ್ಲಿ ಜಯ ಲಭಿಸಲಿ ಎಂದು ಶ್ರೀ ವಿಷ್ಣುವನ್ನು ಪ್ರಾರ್ಥಿಸಿರಿ".

ಹೀಗೆ ಶಿಷ್ಯರಿಗೆ ತಿಳಿಸಿ ರಾಮಾನುಜರು ಕೂರೇಶರೊಂದಿಗೆ ಮೂರು ತಿಂಗಳು ಸತತ ಪ್ರಯಾಣದ ನಂತರ ಕಾಶ್ಮೀರದ ಶಾರದಾಪೀಠವನ್ನು ತಲುಪಿದರು.

ರಾಮಾನುಜರು ಅಲ್ಲಿಯ ದೊಡ್ಡ ದೊಡ್ಡ ವಿದ್ವಾಂಸರುಗಳನ್ನು ಸಂದರ್ಶಿಸಿದರು. ಅವರೊಂದಿಗೆ ಚರ್ಚೆಗಳನ್ನು ನಡೆಸಿದರು. 'ಬೋಧಾಯನವೃತ್ತಿ' ಗ್ರಂಥ ಬೇಡಿಕೆಯನ್ನು ವಿದ್ವಾಂಸರ ಮುಂದಿಟ್ಟರು.

ಅಲ್ಲಿಯ ಅದ್ವೈತಿಗಳು ರಾಮಾನುಜರ ಸೂಕ್ಷ್ಮಬುದ್ಧಿಯನ್ನು ನೋಡಿ ಆ ಪುಸ್ತಕವನ್ನು ಕೊಟ್ಟರೆ ತಮ್ಮ ಅದ್ವೈತ ಸಿದ್ಧಾಂತಕ್ಕೆ ಧಕ್ಕೆ ಬರಬಹುದೆಂದು ಶಂಕಿಸಿದರು.

ಆದ್ದರಿಂದ ಅವರು ರಾಮಾನುಜರಿಗೆ ತಿಳಿಸಿದರು – "ಆ ಗ್ರಂಥ ಈಗ ಲಭ್ಯವಿಲ್ಲ. ಹುಳುತಿಂದು ಹೋಯಿತು".

ರಾಮಾನುಜರು ತಮ್ಮ ಪ್ರಯತ್ನ ವಿಫಲವಾದದ್ದನ್ನು ಕಂಡು ಬಹಳವಾಗಿ ದುಃಖಿಸುತ್ತಿದ್ದರು. ಆಗ ಶಾರದಾ ದೇವಿಯು ಪ್ರತ್ಯಕ್ಷಳಾಗಿ ಬಂದು ಆ ಗ್ರಂಥವನ್ನು ರಾಮಾನುಜರಿಗೆ ಕೊಟ್ಟು ಕೂಡಲೇ ನೀವುಗಳು ಇಲ್ಲಿಂದ ಹೊರಡಿ ಎಂದು ಆಜ್ಞೆ ಮಾಡಿದಳು.

**ರಾಗ-ವಸಂತ** **ಆದಿತಾಳ**

ನುತಿಪೆ ಶಾರದಾದೇವಿ । ಯೇ ನಿನ್ನನು ನಾನು ।
ನತಮಸ್ತಕನಾಗಿ । ಸ್ವೀಕರಿಪೆಗ್ರಂಥವ ॥ಪ॥
ಮತಿಯದಯ ಪಾಲಿಸಿ । ಕಾಪಾಡುತಾಯೆ ।
ಅತಿಮುಖ್ಯವೆನಿಪಶ್ರೀ । ಭಾಷ್ಯರಚನೆಯಲಿ ॥೧॥

ಸತತವು ಎನ್ನಯ । ಹೃದಯದಿ ನೆಲೆಸಿ ।
ಮತಿಹೀನರ ವಾದ । ಖಂಡಿಸುವ ಶಕ್ತಿ ನೀಡು ॥
ಜಾತಿರಹಿತವಾದ । ಎನ್ನಯ ಸಿದ್ಧಾಂತವ ।
ಅತಿಪ್ರೇಮದಿಂದೆಲ್ಲರು । ಗ್ರಹಿಸುವಂತೆ ಮಾಡುಮಾತೆ ॥೨॥

ಶಾರದಾ ದೇವಿಯ ಅನುಜ್ಞೆಯಂತೆ ರಾಮಾನುಜರು ಗ್ರಂಥವನ್ನು ತೆಗೆದುಕೊಂಡು ಕೂರೇಶನೊಡನೆ ತ್ವರಿತವಾಗಿ ಆ ಸ್ಥಳವನ್ನು ಬಿಟ್ಟು ಹೊರಟರು.

ಕೆಲವು ದಿನಗಳ ನಂತರ ಶಾರದಾ ಪೀಠದ ಪುಸ್ತಕ ಭಂಡಾರದಲ್ಲಿ ಪುಸ್ತಕಗಳನ್ನು ಒಂದೊಂದಾಗಿ ತೆಗೆದು ಮತ್ತೆ ಜೋಡಿಸುತ್ತಿದ್ದ ಸಮಯದಲ್ಲಿ ಆ ಬೋಧಾಯನವೃತ್ತಿ ಗ್ರಂಥ ಕಣ್ಣಿಗೆ ಬೀಳಲಿಲ್ಲ.

ಆಗ ಪುಸ್ತಕ ಭಂಡಾರದವರು ಆ ಪುಸ್ತಕ ಹೇಗೋ ರಾಮಾನುಜರ ಕೈ ಸೇರಿರಬೇಕೆಂದು ಊಹಿಸಿದರು. ಕೂಡಲೆ ಅಲ್ಲಿಯ ಪಂಡಿತರು ಇಬ್ಬರು ದಾಂಡಿಗರನ್ನು ರಾಮಾನುಜರನ್ನು ಹಿಂಬಾಲಿಸಿ, ಆ ಗ್ರಂಥವನ್ನು ಅವರಿಂದ ಕಿತ್ತುಕೊಂಡು ಬರಬೇಕೆಂದು ಕಳುಹಿಸಿದರು.

ಅವರು ರಾಮಾನುಜರನ್ನು ಭೇಟಿ ಮಾಡುವ ಸಮಯಕ್ಕೆ ಒಂದು ತಿಂಗಳು ಕಳೆದಿತ್ತು. ರಾಮಾನುಜರು ಮತ್ತು ಕೂರೇಶರು ಸಿಕ್ಕುತ್ತಲೇ ಗಲಾಟೆ ಮಾಡಿ, ಅವರಿಂದ ಪುಸ್ತಕವನ್ನು ಕಿತ್ತುಕೊಂಡು ಹೋದರು. ಹೀಗಾಗಿ ರಾಮಾನುಜರು ಕೈಗೆ ಸಿಕ್ಕಿದ ಪುಸ್ತಕವೂ ಇಲ್ಲದಂತಾಯಿತಲ್ಲ ಎಂದು ಬಹಳ ದುಃಖಿತರಾಗಿ ಅಲ್ಲಿಯೇ ಕುಸಿದು ಬಿದ್ದರು.

**ಕೂರೇಶ:** (ಅತಿ ವಿನಯದಿಂದ ಸಂತೈಸುತ್ತಾ) ಪೂಜ್ಯರೇ, ನಾವು ಕಾಶ್ಮೀರ ಬಿಟ್ಟಂದಿನಿಂದ ಪ್ರತಿ ರಾತ್ರಿ ತಾವು ನಿದ್ರಿಸುತ್ತಿದ್ದಾಗ ನಾನು ಆ ಗ್ರಂಥದ ಅಧ್ಯಯನ ಮಾಡುತ್ತಿದ್ದೆನು. ಹೀಗೆ ಇಡೀ ಗ್ರಂಥವನ್ನೇ ಬಾಯಿಪಾಠ ಮಾಡಿದ್ದೇನೆ. ನಾಲ್ಕೈದು ದಿನಗಳಲ್ಲೇ ಆ ಗ್ರಂಥವನ್ನು ಯಥಾವತ್ತಾಗಿ ಬರೆದು ಮುಗಿಸುತ್ತೇನೆ. ತಾವು ಚಿಂತಿಸಬೇಡಿರಿ".

**ರಾಮಾನುಜರು:** (ಕೂರೇಶನನ್ನು ಬಿಗಿಯಾಗಿ ಅಪ್ಪಿಕೊಂಡು) ಮಗು ಕೂರೇಶ ಕಳೆದು ಹೋಗಿದ್ದ ನಿಧಿಯನ್ನು ತಂದುಕೊಟ್ಟು ನನ್ನ ಮೇಲೆ ಶಾಶ್ವತ ಋಣವನ್ನು ಹೊರಿಸಿದೆ.

ಪ್ರಯಾಣವನ್ನು ಮುಂದುವರಿಸಿ ಕಡೆಗೆ ಶ್ರೀರಂಗವನ್ನು ತಲುಪಿದರು. ಅಲ್ಲಿ ರಾಮಾನುಜರು ತಮ್ಮ ಜಯದ ಬಗ್ಗೆ ಹಾಗೂ ಕೂರೇಶರ ಅದ್ವಿತೀಯ ಸ್ಮರಣ ಶಕ್ತಿಯ ಬಗ್ಗೆ ತಮ್ಮ ಶಿಷ್ಯರಿಗೆಲ್ಲಾ ತಿಳಿಸಿದರು. ಮತ್ತೆ ಶ್ರೀ ಭಾಷ್ಯ ರಚನೆಯ ಅಗತ್ಯದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಅವರಿಗೆ ತಿಳಿಸಿದರು.

"ಕೆಲವರು ಬುದ್ಧಿಜೀವಿಗಳು ಉಪನಿಷದ್ವಾಕ್ಯಗಳಾದ **ತತ್ವಮಸಿ** ಅದುವೆನೀನು **'ಅಹಂಬ್ರಹ್ಮಾಸ್ಮಿ'** 'ನಾನು ಬ್ರಹ್ಮ' ಇವುಗಳನ್ನು ಕೇವಲ ಅರ್ಥಮಾಡಿಕೊಂಡರೆ ಸಾಕು ಮುಕ್ತಿ ಲಭಿಸುವುದೆಂದು ವಾದಿಸುತ್ತಾರೆ.

ಮತ್ತೆ ಕೆಲವರು ಜ್ಞಾನ–ಕರ್ಮ–ಸಮುಚ್ಚಯ ವಾದಿಗಳು ಯಜ್ಞ, ದಾನ, ತಪಸ್ಸು ಮತ್ತು ಕರ್ಮಗಳ ಮೇಲೆ ಹೆಚ್ಚು ಒತ್ತನ್ನು ಕೊಡುತ್ತಾರೆ. ಇಂತಹವರ ಮೌಢ್ಯದ ಅಭಿಪ್ರಾಯಗಳನ್ನು ತೊಡೆದು ಹಾಕಬೇಕು.

ವೇದಗಳಲ್ಲಿ ಹಾಗೂ ವೇದಾಂತಗಳಲ್ಲಿ ಸ್ಪಷ್ಟವಾಗಿ ಹೇಳಿರುವಂತೆ ಮುಕ್ತಿಯನ್ನು ಪಡೆಯಲು ಕೇವಲ ಧ್ಯಾನ, ಉಪಾಸನೆ ಮತ್ತು ಭಕ್ತಿ ಇವುಗಳೇ ಕಾರಣವೆಂದು ಜನರಿಗೆ ತೋರಿಸಬೇಕು. ಇದಕ್ಕಾಗಿಯೇ ಶ್ರೀ ಭಾಷ್ಯದ ರಚನೆಯಾಗಬೇಕಾಗಿದೆ.

ಕೂರೇಶರನ್ನು ಶ್ರೀ ಭಾಷ್ಯ ಬರೆಯಲು ಲಿಪಿಕಾರರನ್ನಾಗಿ ಮಾಡಿಕೊಂಡರು. ಅನುಮಾನ ಬಂದೆಡೆ ಬರೆಯುವುದನ್ನು ನಿಲ್ಲಿಸಬೇಕೆಂದು ತಿಳಿಸಿದರು. ಹೀಗೆ ಶ್ರೀ ಭಾಷ್ಯದ ರಚನೆ ಪ್ರಾರಂಭವಾಯಿತು.

ಕೂರೇಶರು ಒಮ್ಮೆ ಮಾತ್ರ ಯತಿರಾಜರು ಜೀವನ ನಿಜ ಪ್ರಕೃತಿ(ಸ್ವಭಾವ)ಯನ್ನು ವರ್ಣಿಸುವಾಗ ಬರೆಯುವುದನ್ನು ನಿಲ್ಲಿಸಿದರು.

ಯತಿರಾಜರು ಹೇಳಿದರು – "ಜೀವನು ತನ್ನ ಸ್ವಭಾವದಿಂದ ನಿತ್ಯನೂ, ಜ್ಞಾತನೂ ಆಗಿದ್ದಾನೆ" ಅಥವಾ "ಜೀವಾತ್ಮನು ಸಚೇತನನು ಹಾಗು ಜ್ಞಾನಿಯು ಆಗಿದ್ದಾನೆ".

ಬರೆಯುವುದನ್ನು ನಿಲ್ಲಿಸಿದಾಗ ರಾಮಾನುಜರು ಕೂರೇಶರ ಮೇಲೆ ಕೋಪಗೊಂಡರು. "ನೀನೇ ಭಾಷ್ಯವನ್ನು ಬರೆ" ಎಂದರು.

ಆದರೆ ಕೋಪ ಇಳಿದ ಮೇಲೆ ಪುನಃ ತಾವು ಜೀವಾತ್ಮನ ಬಗ್ಗೆ ಹೇಳಿದ ಉಕ್ತಿಯ ಮೇಲೆ ಯೋಚಿಸತೊಡಗಿದರು. "ಜೀವನು ಸ್ವಭಾವತಃ ಶಾಶ್ವತನು ಮತ್ತು ತಿಳಿಯುವವನು (ಜ್ಞಾನಿ) ಆದ ಮೇಲೆ ದೇಹಾಭಿಮಾನದಿಂದ ಸ್ವತಂತ್ರಕರ್ತನು, ಭೋಕ್ತನು ಎಂದು ಹೇಳುವಲ್ಲಿ ತಪ್ಪೇನಿದೆ".

ಆದರೆ ಕೃಷ್ಣಭಗವಾನ್ ಹೇಳಿರುವ ಗೀತೋಕ್ತಿ –

ಮಮೈವಾಂಶೋ ಜೀವಲೋಕೇ ಜೀವಭೂತಃ
ಸನಾತನಃ । (ಗೀತಾ–ಅಧ್ಯಾಯ 15, ಶ್ಲೋಕ 7)

'ಶಾಶ್ವತವಾದ ನನ್ನ ಅಂಶವೇ ಈ ಜೀವಭೂತ ಪ್ರಪಂಚದಲ್ಲಿ ಜೀವಾತ್ಮನಾಗಿದ್ದಾನೆ.... ಇದರ ಆಧಾರದ ಮೇಲೆ ತಮ್ಮ ಮೊದಲ ಉಕ್ತಿಯನ್ನು ಬದಲಾಯಿಸಿದರು.

ಅಂದ ಮೇಲೆ ಜೀವನು ಸ್ವತಂತ್ರನಲ್ಲ, ಈಶ್ವರನ ಅಧೀನನು. ಏಕೆಂದರೆ ಜೀವನ ಜೀವಿತ, ಚಲನವಲನ, ಅಸ್ತಿತ್ವ ಎಲ್ಲವೂ ಈಶ್ವರನಲ್ಲಿ. ಅಂದ ಮೇಲೆ ಜೀವನು ಸದಾ ಈಶ್ವರನ ಅಧೀನನು.

ಈಶ್ವರನು ಪೂರ್ಣನು (ಅಂಶಿನ್, ಅಥವಾ ಶೇಷಿನ್) ಜೀವನು ಅಂಶನು (ಅಂಶ ಅಥವಾ ಶೇಷ) ಈ ರೀತಿ ತೀರ್ಮಾನಿಸಿ, ಮತ್ತೆ ರಾಮಾನುಜರು ಜೀವನ ಮುಖ್ಯ ಪ್ರಕೃತಿ ವಿಷ್ಣು ಶೇಷತ್ವ ಹಾಗೂ ಜ್ಞಾತೃತ್ವ ಎಂದು ತಿಳಿಸಿದರು. ಅಥವಾ ವಿಷ್ಣು ಒಡೆಯ, ಜೀವ ಆಸ್ತಿ. ಒಡೆಯನು ತನ್ನ ಆಸ್ತಿಯನ್ನು ತನ್ನ ಇಷ್ಟದಂತೆ ಬಳಸಬಹುದು ಎಂಬ ಅಭಿಪ್ರಾಯಕೊಟ್ಟರು. ಆಗ ಕೂರೇಶರು ಬರವಣಿಗೆಯನ್ನು ಮುಂದುವರಿಸಿದರು. ಹೀಗೆ ಶ್ರೀಭಾಷ್ಯದ ಭಾಷ್ಯ ಪೂರ್ಣವಾಯಿತು.

ಇದಾದ ಮೇಲೆ ಯತಿರಾಜರು ಮತ್ತೆ ನಾಲ್ಕು ಉದ್ಗ್ರಂಥಗಳನ್ನು ರಚಿಸಿದರು 1. **ವೇದಾಂತ-ದೀಪ**, 2. **ವೇದಾಂತಸಾರ** 3. **ವೇದಾರ್ಥಸಂಗ್ರಹ** ಮತ್ತು 4. **ಗೀತಾಭಾಷ್ಯ**.

ರಾಮಾನುಜರು ತಮ್ಮ ಶಿಷ್ಯರೊಂದಿಗೆ ದ್ರಾವಿಡ ಪ್ರಬಂಧ ಮಾಲಾವನ್ನು ಅಧ್ಯಯನ ಮಾಡಿ ಯಾಮುನ ಮುನಿಗಳ ಮೊದಲನೆಯ ಆಶೆಯನ್ನು ಪೂರ್ಣಗೊಳಿಸಿದರು. ಅದೇ ಗ್ರಂಥವನ್ನು ಈಗ ದ್ರಾವಿಡ ವೇದವೆಂದು, ಅದೇ ಸಿದ್ಧಾಂತವನ್ನು '**ವಿಶಿಷ್ಟಾದ್ವೈತ-ವಾದ**'ವೆಂದು, ಕರೆಯುತ್ತಾರೆ.

ಈ ರೀತಿ ಶ್ರೀ ಭಾಷ್ಯವನ್ನು ರಚಿಸಿ ಯಾಮುನ ಮುನಿಗಳ ಎರಡನೆಯ ಇಚ್ಛೆಯನ್ನು ಪೂರೈಸಿದರು.

— ❋ —

# 22

# ವಿಜಯ

ಗ್ರಂಥಗಳ ರಚನೆ ಮುಗಿದ ನಂತರ ತಮ್ಮ ಮುಖ್ಯ 74 ಶಿಷ್ಯರನ್ನು ಹಾಗೂ ಇತರ ಅನುಯಾಯಿಗಳನ್ನು ಕೂಡಿಕೊಂಡು ಯತಿರಾಜರು ದಿಗ್ವಿಜಯಕ್ಕೆ ಹೊರಟರು.

ಚೋಳರಾಜ್ಯದ ರಾಜಧಾನಿ ಕಾಂಚೀಪುರ(ಕಂಚಿ)ಕ್ಕೆ ಬಂದು ಶ್ರೀ ವರದರಾಜನ ದರ್ಶನ ಪಡೆದರು.

ಕುಂಭಕೋಣಂನಲ್ಲಿ ಅನೇಕ ಸ್ಥಳೀಯ ವಿದ್ವಾಂಸರನ್ನು ತರ್ಕಶಾಸ್ತ್ರಗಳಲ್ಲಿ ಸೋಲಿಸಿ ಶರಣಾಗತರನ್ನಾಗಿ ಮಾಡಿಕೊಂಡರು.

ನಂತರ ಪಾಂಡ್ಯರ ರಾಜಧಾನಿ ಮಧುರೆಗೆ ಬಂದರು. ಇದು ದ್ರಾವಿಡ ವಿದ್ವಾಂಸರ ಕೋಟೆಯೇ ಆಗಿತ್ತು. ಅಲ್ಲಿ ಪ್ರಬಂಧಮಾಲಾದ ಸೂತ್ರಗಳನ್ನು ಹೇಳಿ ಅಲ್ಲಿಯ ವಿದ್ವಾಂಸರನ್ನು ಪವಿತ್ರರನ್ನಾಗಿ ಮಾಡಿದರು. ಅಲ್ಲಿಯವರೆಲ್ಲರೂ ಇವರ ಸಿದ್ಧಾಂತವನ್ನು ಒಪ್ಪಿಕೊಂಡರು. ಅಲ್ಲಿಯ ಮುಖ್ಯದೇವಸ್ಥಾನದಲ್ಲಿ ಶ್ರೀ ಶಠಾರಿ ಆಕೃತಿಯ ದರ್ಶನ ಮಾಡಿ ಆನಂದ ಭರಿತರಾದರು.

ಅಲ್ಲಿಂದ ಕುರಂಗಪಟ್ಟಣ ಸೇರಿ ಶ್ರೀ ವಿಷ್ಣುವಿನ ದರ್ಶನ ಪಡೆದರು. ಅಲ್ಲಿಯ ವಿಷ್ಣುವೇ ರಾಮಾನುಜರ ಅತುಲನೀಯ ಕಾರ್ಯಕಲಾಪಗಳನ್ನು ನೋಡಿ ಸಂತುಷ್ಟನಾಗಿ ತಾನೇ ರಾಮಾನುಜರ ಶಿಷ್ಯನಾಗಿ ಗುರುವಿನಿಂದ **ಶ್ರೀ ವೈಷ್ಣವ ನಂಬಿಯೆಂದು** ಕರೆಸಿಕೊಂಡನೆಂದು ಪ್ರತೀತಿ.

ನಂತರ ಶಠರಿಪುವಿನ ಹುಟ್ಟು ಸ್ಥಳವಾದ ಕುರುಕಾಪುರಿಗೆ ಹೋದರು. ಅಲ್ಲಿಯೂ ಶ್ರೀ ಶಠಾರಿಯ ದರ್ಶನ ಪಡೆದರು.

ನಂತರ ಕೇರಳ ಪ್ರಾಂತಕ್ಕೆ ತೆರಳಿದರು. ಅದರ ರಾಜಧಾನಿ ತಿರುವನಂತಪುರದಲ್ಲಿ ಅನಂತನ ಮೇಲೆ ಮಲಗಿರುವ ಪದ್ಮನಾಭಸ್ವಾಮಿಯ ದರ್ಶನವನ್ನು ಮಾಡಿ ಕೃತಾರ್ಥರಾದೆವೆಂದು ತಿಳಿದರು.

ನಂತರ ಉತ್ತರಕ್ಕೆ ಹೊರಟರು. ದ್ವಾರಕಾ, ಮಥುರಾ, ಬೃಂದಾವನ ಈ ಪುಣ್ಯ ಕ್ಷೇತ್ರಗಳಲ್ಲಿ ಗೀತಾಚಾರ್ಯ ಶ್ರೀ ಕೃಷ್ಣ ಪರಮಾತ್ಮನ ದರ್ಶನ ಮಾಡುತ್ತಾ ಯತಿರಾಜರು ಪರಮಾನಂದ ಭರಿತರಾಗಿ ಆ ಮಹಾಮಹಿಮನನ್ನು ಕೊಂಡಾಡಿದರು –

ಹೇ ಗೋಪಾಲಕ, ಹೇ ಕೃಪಾ
ಜಲನಿಧೇ, ಹೇಸಿಂಧು ಕನ್ಯಾಪತೇ,
ಹೇ ಕಂಸಾತಕ, ಹೇ ಗಜೇಂದ್ರ
ಕರುಣಾಪಾರೀಣ, ಹೇ ಮಾಧವ ।
ಹೇ ರಾಮಾನುಜ, ಹೇ ಜಗತ್ರಯ
ಗುರೋ, ಹೇ ಪುಂಡರೀಕಾಕ್ಷ ಮಾಂ
ಹೇ ಗೋಪೀಜನನಾಥ ಪಾಲಯ
ಪರಂ ಜಾನಾಮಿ ನ ತ್ವಾಂ ವಿನಾ ॥ (ಮುಕುಂದಮಾಲಾ)

ಎಲೈ ಗೋಪಾಲನೇ, ಎಲೈ ಕೃಪಾಸಮುದ್ರನೇ, ಎಲೈ ಸಾಗರ ತನುಜೆಯಾದ ಲಕ್ಷ್ಮೀದೇವಿಯ ಪತಿಯೇ, ಎಲೈ ಕಂಸಸಂಹಾರಕನೇ, ಎಲೈ ಗಜೇಂದ್ರನಲ್ಲಿ ನಿರವಧಿ ಕರುಣೆ ತೋರಿದವನೇ, ಎಲೈ ಮಾಧವನೇ, ಎಲೈ ಬಲರಾಮನ ತಮ್ಮನೇ, ಎಲೈ ತ್ರಿಲೋಕ ಗುರುವೇ, ಎಲೈ ಬಿಳಿಯ ತಾವರೆಯಂತಹ ಕಣ್ಣುಳ್ಳವನೇ, ಎಲೈ ಗೋಪಿಕಾವಲ್ಲಭನೇ, ನನ್ನನ್ನು ಕಾಪಾಡು. ನಿನ್ನನ್ನು ಬಿಟ್ಟು ಉತ್ತಮನಾದ ಬೇರೊಬ್ಬನನ್ನು ನಾನು ಅರಿಯೆನು.

ಅನಂತರ ಶಾಲಗ್ರಾಮ, ಸಾಕೇತ, ಬದರಿಕಾಶ್ರಮ, ನೈಮಿಷ, ಪುಷ್ಕರ, ಇವುಗಳನ್ನು ಹಾದು ಕಡೆಗೆ ಕಾಶ್ಮೀರದ ಶಾರದಾಪೀಠ ಸೇರಿದರು.

ಅಲ್ಲಿ ಶಾರದಾದೇವಿ 'ಕಪ್ಯಾಸಂ ಪುಂಡರೀಕಾಕ್ಷಂ' ಮಂತ್ರದ ಸ್ಪಷ್ಟೀಕರಣವನ್ನು ಅವರಿಂದ ಕೇಳಿ '**ಶ್ರೀಭಾಷ್ಯಕಾರ**'ರೆಂಬ ಬಿರುದು ಕೊಟ್ಟಳು.

ಅಲ್ಲಿ ಕೆಲವು ವಿದ್ವಾಂಸರು ರಾಮಾನುಜರನ್ನು ಕೊನೆಗಾಣಿಸಲು ಮಾಟ, ಮಂತ್ರಗಳನ್ನು ಮಾಡಿದರು. ಕೊನೆಗೆ ಮಾಟಮಂತ್ರ ಮಾಡಿದವರೇ ಅಸುನೀಗುವ ಪರಿಸ್ಥಿತಿ ಒದಗಿತ್ತು. ಆಗ ಅಲ್ಲಿಯ ರಾಜ ರಾಮಾನುಜರ ಪಾದಗಳನ್ನು ಹಿಡಿದು ಕ್ಷಮೆ ಯಾಚಿಸಿದನು. ಆಗ ಅವರೆಲ್ಲರೂ ಗುಣಮುಖರಾದರು.

ಅಲ್ಲಿ ರಾಮಾನುಜರು ಹಯಗ್ರೀವನ ರೂಪದಲ್ಲಿ ದೇವರನ್ನು ಕಂಡರು.

ನಂತರ ಶಾರದೆಯ ಅನುಜ್ಞೆಯನ್ನು ಪಡೆದು ಕಾಶೀಪಟ್ಟಣಕ್ಕೆ ಹೋದರು. ಅಲ್ಲಿಯ ವಿದ್ವಾಂಸರನ್ನೂ, ದಾರ್ಶನಿಕರನ್ನೂ ತನ್ನವರನ್ನಾಗಿ ಮಾಡಿಕೊಂಡರು.

ಅಲ್ಲಿಂದ ದಕ್ಷಿಣ ದಿಕ್ಕಿಗೆ ಪ್ರಯಾಣ ಬೆಳಸಿ ಶ್ರೀ ಪುರುಷೋತ್ತಮ ಕ್ಷೇತ್ರ (ಪುರಿಕ್ಷೇತ್ರ)ವನ್ನು ತಲುಪಿದರು. ಅಲ್ಲಿ ಗೋವಿಂದರ ಹೆಸರಿನಲ್ಲಿ ಎಂಬಾರ್ ಮಠವನ್ನು ಸ್ಥಾಪಿಸಿದರು.

ಅಲ್ಲಿಯ ವಿದ್ವಾಂಸರು ಸೋಲುವೆವೆಂಬ ಭಯದಿಂದ ರಾಮಾನುಜರೊಂದಿಗೆ ಚರ್ಚೆ ನಡೆಸಲು ಬರಲಿಲ್ಲ.

ರಾಮಾನುಜರು ಸ್ವಾಮಿ ಜಗನ್ನಾಥನ ಅರ್ಚನೆಯನ್ನು ಪಾಂಚರಾತ್ರಾಗಮ ಪ್ರಕಾರ ಮಾಡುವಂತೆ ಅಲ್ಲಿಯ ಅರ್ಚಕರನ್ನು ಕೇಳಿಕೊಂಡರು. ಅರ್ಚಕರು ಅವರ ಹೊಸ ಸಿದ್ಧಾಂತವನ್ನು ನಿರಾಕರಿಸಿದರು. ಆಗ ರಾಮಾನುಜರು ಚರ್ಚಾಗೋಷ್ಠಿಯನ್ನು ಏರ್ಪಡಿಸಲು ರಾಜನ ಮೊರೆ ಹೋದರು.

ಅದಕ್ಕೆ ಹೆದರಿ ಅರ್ಚಕರು ಶ್ರೀ ಪುರುಷೋತ್ತಮನ ಮೊರೆ ಹೋದರು. ಆಗ ಜಗನ್ನಾಥನು ಆರಾತ್ರಿ ನಿದ್ರಿಸುತ್ತಿದ್ದ ರಾಮಾನುಜರನ್ನು ನೂರು ಯೋಜನದ ದೂರದ ಕೂರ್ಮ ಕ್ಷೇತ್ರಕ್ಕೆ ಕೊಂಡೊಯ್ದನು.

ಬೆಳಗಾಗ ಎಚ್ಚೆತ್ತಾಗ ರಾಮಾನುಜರು ಹೊಸ ಸ್ಥಳಕ್ಕೆ ಬಂದಿರುವುದಾಗಿ ಭಾಸವಾಯಿತು. ಶಿಷ್ಯರಾರೂ ಇರಲಿಲ್ಲ. ವಿಚಾರಿಸಲಾಗಿ ಅದು ಕೂರ್ಮಕ್ಷೇತ್ರವೆಂದು ತಿಳಿಯಿತು. ಅವರು ಇದು ಪರಮಾತ್ಮನ ಕೈವಾಡವೆಂದೇ ತಿಳಿದು, ನಿತ್ಯ ಕರ್ಮಗಳನ್ನು ಮುಗಿಸಿಕೊಂಡು ಕೂರ್ಮದೇವನ ದೇವಾಲಯಕ್ಕೆ ಹೋಗಿ ಭಕ್ತಿಯಿಂದ ಕೂರ್ಮಾವತಾರಿಯಾದ ಸ್ವಾಮಿಯನ್ನು ಪೂಜಿಸಿದರು. ಸಂತೃಪ್ತನಾದ ಸ್ವಾಮಿ ತನ್ನ ಅರ್ಚಕನ ಮೂಲಕ ರಾಮಾನುಜರು ಅವರ ಶಿಷ್ಯರುಗಳು ಬರುವವರೆಗೆ ಕಾದಿರಬೇಕೆಂದು ಆಣತಿಯಿತ್ತನು.

ಶಿಷ್ಯರೆಲ್ಲರೂ ಅಲ್ಲಿಗೆ ಬಂದ ಮೇಲೆ ಎಲ್ಲರೂ ಸಿಂಹಾಚಲವನ್ನು ಸೇರಿದರು. ಅಲ್ಲಿ ಕೆಲವು ದಿನಗಳು ತಂಗಿ, ಅಹೋಬಲದೇವ ಸ್ಥಾನಕ್ಕೆ ಹೋದರು. ಅದು ಗರುಡಾಚಲದ ಮೇಲೆ ನಿರ್ಮಿತವಾಗಿದೆ. ಅಲ್ಲಿ ಒಂದು ಮಠವನ್ನು ಸ್ಥಾಪಿಸಿದರು.

ನಂತರ ಈಶಲಿಂಗಾಂಗಕ್ಕೆ ಬಂದು ಶ್ರೀ ನರಸಿಂಹನ ದರ್ಶನ ಪಡೆದು ಅವನ ಗುಣಗಾನ ಈ ರೀತಿ ಮಾಡಿದರು.

**ರಾಗ-ಬಿಲಹರಿ** **ಆದಿತಾಳ**

,ಬಂದೆವೊ ನಾವಿಂದು । ನರಸಿಂಹ ನಿನ್ನ ।
,ಸುಂದರ ಮೂರ್ತಿಯ । ದರುಶನ ಪಡೆಯಲು ।।ಪ।।
,ನೊಂದ ಪ್ರಹ್ಲಾದನು । ಭಕ್ತಿಯಿಂ ಪ್ರಾರ್ಥಿಸೆ ।
,ಕುಂದದ ಪದವಿಯ । ನೀನಿತ್ತೆ ಜಗದೊಳು ।।೧।।

,ಕರವ ಜೋಡಿಸಿ ನಿನ್ನ । ಪ್ರಾರ್ಥಿಪೆನೊದೇವ ।
,ಹರಿಯ ಭಕ್ತರ । ಕೈಬಿಡಬೇಡವೊ ।।
,ಸಿರಿಯರಸನೆ ನೀನು । ಸಿರಿಸಂಪದವಿತ್ತು ।
,ಹರಿಸಾನ್ನಿಧ್ಯವ । ದೊರಕಿಸೊಕಡೆಯಲಿ ।।೨।।

ನಂತರ ಹಂತ ಹಂತವಾಗಿ ತಂಗಿ ವೆಂಕಟಾಚಲ (ತಿರುಪತಿ)ವನ್ನು ಸೇರಿದರು.

ಅಲ್ಲಿ ಅದೇ ಸಮಯದಲ್ಲಿ ಶೈವರಿಗೂ ವೈಷ್ಣವರಿಗೂ ಸ್ವಾಮಿಯ ಬಗ್ಗೆ ಜಗಳವಾಗುತ್ತಿತ್ತು. ರಾಮಾನುಜರು ತಮ್ಮ ಅಪೌರುಷೇಯ ಜ್ಞಾನಬಲದಿಂದ ಅವರ ವಾದ ವಿವಾದಗಳನ್ನು ಬಗೆಹರಿಸಿದರು. ಅಲ್ಲಿಯ ಮೂರ್ತಿಯು ವಿಷ್ಣುವೇ ಎಂದು ನಿರ್ಧರಿಸಿದರು. ನಂತರ ಎರಡು ಗುಂಪಿನವರೂ ಅದಕ್ಕೆ ಸಮ್ಮತಿಸಿದರು.

ಕೆಲವು ದಿನಗಳ ನಂತರ ಕಂಚಿಯನ್ನು ಸೇರಿ ಶ್ರೀ ವರದರಾಜನ ದರ್ಶನ ಪಡೆದರು.

ಅಲ್ಲಿಂದ ವೀರನಾರಾಯಣಪುರಂ ಮಾರ್ಗವಾಗಿ ಮದುರಾಂತಕಕ್ಕೆ ಬಂದರು. ಅದು ನಾಥಮುನಿಗಳ ಜನ್ಮಸ್ಥಳವಾಗಿತ್ತು. ಅಲ್ಲಿ ಮಹಾ ಮುನಿಗಳು ಯೋಗಾಭ್ಯಾಸ ಮಾಡಿದ ಸ್ಥಳಕ್ಕೆ ಹೋಗಿ ನಮಸ್ಕಾರ ಮಾಡಿಕೊಂಡು, ಕಡೆಯಲ್ಲಿ ಶ್ರೀರಂಗವನ್ನು ಮುಟ್ಟಿದರು. ಶ್ರೀರಂಗನಾಥನ ದರ್ಶನ ಪಡೆದು ತಾನು ಧನ್ಯನಾದೆನೆಂದು ಭಾವಿಸಿದರು.

ಹೀಗೆ ಅವರ ದಿಗ್ವಿಜಯ ಮುಕ್ತಾಯಗೊಂಡಿತು.

— ❋ —

# 23

# ಕೂರೇಶರು

ಶ್ರೀ ರಂಗನಾಥನ ಆರಾಧಕರಾಗಿದ್ದ ಉತ್ತಮಪೂರ್ಣರು ಲಕ್ಷ್ಮೀಕಾವ್ಯವೆಂಬ ಪದ್ಯ ಗ್ರಂಥವನ್ನು ಬರೆದಿದ್ದಾರೆ. ಅದರಲ್ಲಿ ಕೂರೇಶರ ಜೀವನದ ಪರಿಚಯ ಮಾಡಿಕೊಟ್ಟಿದ್ದಾರೆ.

ಕೂರೇಶರು ರಾಮಾನುಜಾಚಾರ್ಯರ ಪ್ರಮುಖ ಶಿಷ್ಯರಲ್ಲೊಬ್ಬರಾಗಿದ್ದರು. ಅವರ ವಾಸಸ್ಥಳ ಕಾಂಚೀಪುರಕ್ಕೆ ಒಂದೆರಡು ಮೈಲಿ ದೂರದಲ್ಲಿರುವ ಕೂರಗ್ರಹಾರ. ಅವರು ಅಲ್ಲಿಯ ಜಮೀನ್ದಾರರು. ಅಲ್ಲಿಯ ಜನರು ಅವರನ್ನು ಕೂರನಾಥರೆಂದು ಕರೆಯುತ್ತಿದ್ದರು. ಅವರ ಪತ್ನಿ ಆಂಡಾಳ್. ಅವರು ವಿಪುಲ ಐಶ್ವರ್ಯವನ್ನು ಬಡವರ, ದೀನರ, ದುರ್ಬಲರ ಸಹಾಯಕ್ಕಾಗಿ ಉಪಯೋಗಿಸುತ್ತಿದ್ದರು.

ದಂಪತಿಗಳಿರ್ವರೂ ರಾಮಾನುಜರ ಶಿಷ್ಯರಾಗಿದ್ದರು. ಕೂರೇಶರಿಗೆ ಅದ್ವಿತೀಯ ಜ್ಞಾಪಕಶಕ್ತಿ ಇದ್ದಿತು. ಈ ವಿಷಯವನ್ನು ನಾವಾಗಲೇ ತಿಳಿದಿದ್ದೇವೆ. ಬಾದರಾಯಣರ ವೃತ್ತಿ ಗ್ರಂಥವನ್ನು ಒಂದು ಸಾರಿ ಓದಿದ ಮಾತ್ರಕ್ಕೆ ಪೂರ್ಣಗ್ರಂಥವನ್ನೇ ನೆನಪಿನಲ್ಲಿಟ್ಟು ಕೊಂಡಿದ್ದರು.

ಅವರ ಭವ್ಯ ಭವನದ ಹೆಬ್ಬಾಗಿಲು ಮಧ್ಯರಾತ್ರಿಯವರೆಗೂ ದೀನದರಿದ್ರರಿಗೆ ತೆರೆದಿರುತ್ತಿತ್ತು. 'ತೆಗೆದುಕೊಳ್ಳಿರಿ, ಕೊಡಿರಿ, ಆನಂದಪಡಿರಿ' ಎಂಬ ಶಬ್ದಗಳು ಭವನದಲ್ಲಿ ಯಾವಾಗಲೂ ಪ್ರತಿಧ್ವನಿತವಾಗುತ್ತಿದ್ದವು. ಹೆಬ್ಬಾಗಿಲು ಮುಚ್ಚುವಾಗ್ಗೆ ದೊಡ್ಡ ಶಬ್ದವಾಗುತ್ತಿತ್ತು. ಪುನಃ ಬೆಳಗಾಗ ತೆರೆಯುತ್ತಿತ್ತು.

ರಾಮಾನುಜರು ಕಾಂಚೀಪುರವನ್ನು ಬಿಟ್ಟು ಶ್ರೀರಂಗ ಸೇರಿದ ಮೇಲೆ ಕೂರೇಶರಿಗೆ ತಮ್ಮ ಐಶ್ವರ್ಯ ಆಸ್ತಿಪಾಸ್ತಿಗಳ ವ್ಯಾಮೋಹ ದೂರವಾಗಿತ್ತು.

ಒಮ್ಮೆ ಶ್ರೀ ವರದರಾಜನ ಪತ್ನಿ ಜಗನ್ಮಾತೆ ಲಕ್ಷ್ಮೀದೇವಿ ಕೂರೇಶರ ಮನೆಯ ಹೆಬ್ಬಾಗಿಲ ಶಬ್ದವನ್ನು ಕೇಳಿ ಕಾಂಚೀಪೂರ್ಣರನ್ನು ಆ ಶಬ್ದ ಎಲ್ಲಿಂದ? ಎಂದು ಪ್ರಶ್ನಿಸಿದಳು. ಕಾಂಚೀಪೂರ್ಣರು ಕೂರೇಶರ ಜನ ಸೇವೆಯ ವಿವರಣೆಯನ್ನು ಕೊಟ್ಟರು.

ಮಹಾಲಕ್ಷ್ಮಿಯು "ಆತನನ್ನು ನೋಡಬೇಕು ಕರೆತಾ" ಎಂದು ಆಜ್ಞೆಮಾಡಿದಳು. ಕಾಂಚೀಪೂರ್ಣರು ಕೂಡಲೇ ಲಕ್ಷ್ಮೀದೇವಿಯ ಆಶೆಯನ್ನು ಕೂರೇಶರಿಗೆ ತಿಳಿಸಿದರು.

**ಕೂರೇಶರು:** ಬ್ರಹ್ಮರುದ್ರರಿಂದ ಆರಾಧಿಸಲ್ಪಡುವ, ಜಗನ್ಮಾತೆ ಆ ಮಹಾಲಕ್ಷ್ಮಿಯೆಲ್ಲಿ, ಚಂಡಾಲನಾದ ನಾನೆಲ್ಲಿ? ಈ ಐಶ್ವರ್ಯ ನನ್ನ ಹೃದಯ ಮನಸ್ಸುಗಳನ್ನು ಕಲುಷಿತಗೊಳಿಸಿದೆ. ನಾನು ಲಕ್ಷ್ಮೀದೇವಿಯ ದರ್ಶನ ಪಡೆಯಲು ಅರ್ಹನೆ?" ಈ ರೀತಿ ಕಣ್ಣೀರಿಡುತ್ತಾ ತನ್ನ ಬೆಲೆಬಾಳುವ ವಸ್ತ್ರಾಭರಣಗಳನ್ನೆಲ್ಲಾ ಬಿಸುಟು, ಚಿಂದಿಬಟ್ಟೆಯನ್ನುಟ್ಟು "ಮಹಾತ್ಮ ನಾನು ಜಗನ್ಮಾತೆಯ ಆಜ್ಞೆಯನ್ನು ನಿರಾಕರಿಸಲಾರೆ, ಅವಳ ಪಾದಕಮಲಗಳ ದರ್ಶನಕ್ಕೆ ಸಿದ್ಧನಿದ್ದೇನೆ" ಎಂದು ತಿಳಿಸಿದರು.

"ಗುರುಗಳ ಪಾದಸ್ಪರ್ಶದಿಂದ ಪವಿತ್ರವಾಗಿರುವ, ಅಮರತ್ವವನ್ನು ಪಡೆದಿರುವ ಆ ಕೊಳದಲ್ಲಿ ಮುಳುಗಿ, ನನ್ನ ಪಾಪದ ಕೊಳೆಯನ್ನು ತೊಳೆದುಕೊಂಡು, ದೇವಿಯ ದರ್ಶನಕ್ಕೆ ಬರುತ್ತೇನೆ. ತಮ್ಮಂತಹ ಪುಣ್ಯಾತ್ಮರ ಆಶೀರ್ವಾದದಿಂದಲಾದರೂ ಈ ಜನ್ಮದಲ್ಲೇ ಆ ದೇವಿಯ ದರ್ಶನ ಭಾಗ್ಯ ನನಗೆ ಸಿಗಲಿ" ಎಂದರು.

ಕಾಂಚೀಪೂರ್ಣರು ಕೂರೇಶರಿಗೆ ಶ್ರೀರಂಗಕ್ಕೆ ಹೋಗಲು ಒಪ್ಪಿಗೆ ಕೊಟ್ಟರು.

ಕೂರೇಶರು ಮತ್ತು ಪತ್ನಿ ಆಂಡಾಳ್ ಇಬ್ಬರೂ ಶ್ರೀರಂಗಕ್ಕೆ ಹೊರಟರು. ಮಧ್ಯೆ ಅರಣ್ಯ ಪ್ರದೇಶ. ಆಂಡಾಳಲು ನೀರಿಗಾಗಿ ಒಂದು ಚಿನ್ನದ ಗಿಂಡಿಯನ್ನು ತೆಗೆದು ಕೊಂಡಿದ್ದಳು. ಆ ಘೋರಾರಣ್ಯದಲ್ಲಿ ಆಕೆಗೆ ಭಯವಾಯಿತು. ತನ್ನ ಗಂಡನನ್ನು ಪ್ರಶ್ನಿಸಿದಳು "ಈ ಅರಣ್ಯದಲ್ಲಿ ಏನೂ ಭಯವಿಲ್ಲವೇ?"

**ಕೂರೇಶರು:** "ಭಯವೆಲ್ಲಿಯದು? ನಿನ್ನಲ್ಲಿ ಯಾವ ಆಭರಣಗಳೂ, ಹಣವೂ ಇಲ್ಲದಿರುವಾಗ ಎಂತಹ ಭಯ?"

ಗಂಡನ ಈ ಮಾತುಗಳನ್ನು ಕೇಳುತ್ತಲೇ ಆಂಡಾಳ್‌ದೇವಿಯು ಆ ಚಿನ್ನದ ಗಿಂಡಿಯನ್ನು ದೂರ ಬಿಸುಟಳು.

ಮಾರನೆಯ ದಿನ ಈರ್ವರೂ ಶ್ರೀರಂಗ ತಲುಪಿದರು.

ರಾಮಾನುಜರಿಗೆ ಈ ದಂಪತಿಗಳು ಬಂದಿರುವ ಸುದ್ದಿ ಮುಟ್ಟುತ್ತಲೇ ಅವರಲ್ಲಿಗೆ ಹೋಗಿ ಪ್ರೀತಿಯಿಂದ ಅವರನ್ನು ತಮ್ಮ ಮಠಕ್ಕೆ ಬರಮಾಡಿಕೊಂಡರು. ಅವರ ಸ್ನಾನ, ಊಟೋಪಚಾರಗಳಾದ ಮೇಲೆ ಅವರಿಗೆ ಒಂದು ಕೊಠಡಿಯನ್ನು ಬಿಟ್ಟು ಕೊಟ್ಟರು.

ಕೂರೇಶರು ಭಿಕ್ಷೆಯಿಂದ ಜೀವನ ಸಾಗಿಸಲು ಪ್ರಾರಂಭಿಸಿದರು. ಪೂಜ್ಯ ಗುರುಗಳಿಂದ ಉಪದೇಶವಾಗಿದ್ದ ಮಂತ್ರಪಠನೆ ಮಾಡ ತೊಡಗಿದರು. ಪವಿತ್ರ ಧರ್ಮಗ್ರಂಥಗಳನ್ನು ಕುರಿತು ಚರ್ಚಿಸ ತೊಡಗಿದರು. ಆಂಡಾಳಳು ಗುರುಗಳ ಹಾಗೂ ಗಂಡನ ಸೇವೆಯಲ್ಲಿ ನಿರತಳಾಗಿದ್ದಳು.

ಒಂದು ದಿನ ಭಾರಿ ಮಳೆ. ಕೂರೇಶರು ಭಿಕ್ಷೆಗೆ ಹೋಗಲಾಗಲಿಲ್ಲ. ಆ ದಿನ ಪೂರ್ತಿ ದಂಪತಿಗಳೀರ್ವರು ಉಪವಾಸ ಮಾಡಬೇಕಾಯ್ತು. ಆದರೆ ಆಂಡಾಳಳಿಗೆ ತನ್ನ ಪತಿಯಚಿಂತೆ. ಮನಸ್ಸಿನಲ್ಲೇ ಶ್ರೀ ರಂಗನಾಥ ಸ್ವಾಮಿಯನ್ನು ಪ್ರಾರ್ಥಿಸಿದಳು.

ಸ್ವಲ್ಪ ಸಮಯದಲ್ಲೇ ಒಬ್ಬ ಅರ್ಚಕನು ಬಂದು ಅವರಿಗೆ ರುಚಿಕರವಾದ ಮಹಾಪ್ರಸಾದವನ್ನು ಕೊಟ್ಟು ಹೋದನು.

ಈ ಭಕ್ಷ್ಯ ಭೋಜ್ಯಗಳನ್ನು ನೋಡಿ ಕೂರೇಶರು ತನ್ನ ಹೆಂಡತಿಯನ್ನು ಪ್ರಶ್ನಿಸಿದರು. "ನೀನು ಶ್ರೀರಂಗನಾಥನಿಗೆ ಮಾನಸಿಕ ಪ್ರಾರ್ಥನೆಯನ್ನು ಸಲ್ಲಿಸಿದೆಯಾ?" ಹಾಗಿಲ್ಲದೆ ಅವನು ನಮ್ಮನ್ನು ಪುನಃ ಅಂಧರನ್ನಾಗಿ ಮಾಡಲು ಇಷ್ಟೊಂದು ರುಚಿಕರ ಭಕ್ಷ್ಯಗಳನ್ನು ಕಳುಹಿಸುತ್ತಿರಲಿಲ್ಲ. ನಾವು ಇಂತಹವುಗಳನ್ನೆಲ್ಲಾ ಕಡೆಗಣಿಸಿದ್ದಾಗಿದೆ.

ಆಂಡಾಳಳು ಕಣ್ಣೀರಿಡುತ್ತಾ ಒಪ್ಪಿಕೊಂಡಳು.

ಕೂರೇಶರು ಮತ್ತೊಮ್ಮೆ ಈ ರೀತಿ ಮಾಡಬೇಡವೆಂದು ತಿಳಿಸಿ ಮಹಾಪ್ರಸಾದವನ್ನು ಇಬ್ಬರೂ ತೆಗೆದುಕೊಂಡರು. ರಾತ್ರಿಯೆಲ್ಲಾ ಶಠಾರಿ ಸೂಕ್ತಿ ಜಪಿಸುತ್ತಾ ಕಳೆದರು.

ಆಂಡಾಳಳು ಪ್ರಸಾದವನ್ನು ತೆಗೆದುಕೊಂಡ ಹತ್ತು ತಿಂಗಳಲ್ಲಿ ಹುಣ್ಣಿಮೆಯ ರಾತ್ರಿ, ಅನುರಾಧಾ ನಕ್ಷತ್ರದಲ್ಲಿ ಅವಳಿ ಗಂಡು ಮಕ್ಕಳನ್ನು ಹಡೆದಳು.

ರಾಮಾನುಜರು ಈ ಸಂತಸದ ಸುದ್ದಿಯನ್ನು ಕೇಳಿ ಆತ್ಮಾನಂದಭರಿತರಾದರು. ಕೂಡಲೇ ಜಾತಕರ್ಮಕ್ಕೆ ಗೋವಿಂದರನ್ನು ಕಳುಹಿಸಿದರು.

ಜಾತಕರ್ಮದ ನಂತರ ರಾಮಾನುಜರು ಮಕ್ಕಳ ಕಿವಿಯಲ್ಲಿ ಪವಿತ್ರ ಮಂತ್ರೋಪದೇಶ ಮಾಡಿದರು. **'ಶ್ರೀಮನ್ನಾರಾಯಣ ಚರಣೌ ಶರಣಂ ಪ್ರಪದ್ಯೇ, ಶ್ರೀಮತೇ ನಾರಾಯಣಾಯ ನಮಃ'.**

ರಾಮಾನುಜರು ಎರಡು ಬಂಗಾರದ ಪದಕಗಳನ್ನು ಮಾಡಿಸಿದರು. ಅವುಗಳಲ್ಲಿ ವಿಷ್ಣುವಿನ ಐದು ಆಯುಧಗಳ ಚಿನ್ಹೆಗಳಿದ್ದವು. (ಪಾಂಚಜನ್ಯ, ಸುದರ್ಶನ, ಕೌಮೋದಕೀ, ನಂದಕ, ಶಾರ್ಙ್ಗ) ಅವುಗಳನ್ನು ಮಕ್ಕಳ ಕೊರಳಿಗೆ ತೂಗು ಹಾಕಿದರು. ಇವುಗಳು ಮಕ್ಕಳನ್ನು ಭೂತ, ಪ್ರೇತ, ಪಿಶಾಚಾದಿಗಳ ದುಷ್ಪ್ರಭಾವಗಳಿಂದ ರಕ್ಷಿಸುತ್ತಿದ್ದವು.

ಆರು ತಿಂಗಳ ನಂತರ ಹಿರಿಯ ಮಗುವಿಗೆ **ಪರಾಶರ**ನೆಂತಲೂ, ಕಿರಿಯ ಮಗುವಿಗೆ **ವ್ಯಾಸ**ನೆಂತಲೂ ನಾಮಕರಣ ಮಾಡಿದರು.

ನಂತರ ಗೋವಿಂದರ ತಮ್ಮ ಬಾಲಗೋವಿಂದನ ಮಗುವಿಗೆ **ಪರಾಂಕುಶ** ಪೂರ್ಣನೆಂದು ಹೆಸರಿಟ್ಟು ಯತಿರಾಜರು ಯಾಮುನಾಚಾರ್ಯರಿಗೆ ಕೊಟ್ಟಿದ್ದ ಮೂರನೆಯ ಶಪಥವನ್ನು ಪೂರ್ಣ ಮಾಡಿದರು.

ಪರಾಶರ ತನ್ನ ಎಳೆಯ ವಯಸ್ಸಿನಿಂದಲೇ ಅದ್ವಿತೀಯ ಚತುರನಾಗಿದ್ದನು. ಆತ ಒಮ್ಮೆ ತನ್ನ ಗೆಳೆಯರೊಂದಿಗೆ ಬೀದಿಯಲ್ಲಿ ಆಟವಾಡುತ್ತಿದ್ದ ಸಮಯದಲ್ಲಿ **ಸರ್ವಜ್ಞ ಭಟ್ಟ**ನೆಂಬ ಮಹಾನ್ ಪಂಡಿತ ತನ್ನ ಶಿಷ್ಯರೊಡಗೂಡಿ ಹೋಗುತ್ತಿದ್ದನು. ಶಿಷ್ಯರು ಡಂಗುರ ಸಾರುತ್ತ ಮುಂದೆ ದರ್ಪದಿಂದ ಹೋಗುತ್ತಿದ್ದರು – "ಯಾರು ಬೇಕಾದರೂ ನಮ್ಮ ಗುರುಗಳೊಂದಿಗೆ ವಾದಕ್ಕೆ ಬರಬಹುದು,ಇಲ್ಲವೇ ಶಿಷ್ಯರಾಗಬಹುದು".

ಈ ಘೋಷಣೆಯನ್ನು ಕೇಳುತ್ತಲೇ ಈ ಹುಡುಗ, 5 ವರ್ಷದ ಪರಾಶರ ನಗುತ್ತ ಕೈಯಲ್ಲಿ ಒಂದು ಹಿಡಿ ಧೂಳನ್ನು ತೆಗೆದುಕೊಂಡು ಸರ್ವಜ್ಞರ ಹತ್ತಿರ ಧಾವಿಸಿದನು. ಈ ರೀತಿ ಪ್ರಶ್ನಿಸಿದನು.

**ಕಾಂಬೋಜಿ**

ಕಂದ|| ಮನವಿಯಂಕೇಳಿವಿದುಷರೆ
ಎನ್ನಯ ಹಸ್ತದಲ್ಲಿಹ ಧೂಳಿನ ಕಣಂಗಳಂ
ಮನಮಾಡೆಣಿಸಬಲ್ಲಿರಾ
ಘನಮಹಿಮ ಸರ್ವಜ್ಞಭಟ್ಟರ್ ಪೇಳ್ಕೆನಗಂ ||

ಪಂಡಿತರು ಈ ಪ್ರಶ್ನೆ ಕೇಳಿ ತಬ್ಬಿಬ್ಬುಗೊಂಡರು. ತನ್ನ ಸರ್ವಜ್ಞನೆಂಬ ಅಹಂಕಾರವನ್ನು ತ್ಯಜಿಸಿ, ಆ ಹುಡುಗನನ್ನು ತನ್ನ ತೊಡೆಯ ಮೇಲೆ ಕೂಡಿಸಿಕೊಂಡು ಮುದ್ದಿಸಿದರು.

**ಸರ್ವಜ್ಞಭಟ್ಟರು:** ಮಗು, ನೀನೆ ನನ್ನ ಗುರು. ನಿನ್ನ ಪ್ರಶ್ನೆ ನನ್ನಲ್ಲಿ ಪ್ರಜ್ಞೆ ಮೂಡಿಸಿತು.

ಜನರು ಶ್ರೀರಂಗನಾಥನ ಪ್ರಸಾದದಿಂದ ಜನಿಸಿದ ಪರಾಶರ ಮತ್ತು ವ್ಯಾಸರನ್ನು ಸ್ವಾಮಿಯ ಮಕ್ಕಳೆಂದೇ ಭಾವಿಸಿದ್ದರು.

ಪರಾಶರನ ಉಪನಯನವಾದ ಮೇಲೆ ಒಂದು ದಿನ ಗೋವಿಂದರು ಉಪನಿಷತ್ತುಗಳನ್ನು ಓದುತ್ತಾ ಹೇಳಿದರು – 'ಪರಮಾತ್ಮನ ಗುಣ ಅನಂತ. ಅವನೇ ಅಣೋರಣೀಯನೂ, ಮಹತೋ ಮಹೀಯನೂ ಆಗಿರುವನು'.

ಕೂಡಲೇ ಪರಾಶರ ಪ್ರಶ್ನಿಸಿದನು – 'ಎರಡೂ ವಿರುದ್ಧ ಗುಣಗಳು ಒಬ್ಬನಲ್ಲೇ ಇರಲು ಹೇಗೆ ಸಾಧ್ಯ?'.

ಗೋವಿಂದರು ಅದಕ್ಕೆ ಉತ್ತರಿಸದೇ ಹೋದರು.

ಉಪನಯನವಾದ ಕೆಲವು ದಿನಗಳಲ್ಲೇ ಆತನು ಯತಿರಾಜರ ಅಪೇಕ್ಷೆಯಂತೆ ಮಹಾಪೂರ್ಣರ ಬಳಗದ ಇಬ್ಬರು ಹೆಣ್ಣು ಮಕ್ಕಳನ್ನು ಮದುವೆಯಾದನು.

# 24

# ಧನುರ್ದಾಸ (ಪಿಳ್ಳೈ ಉರಂಗ, ವಿಲ್ಲಿದಾಸರ್)

ಅಂದು ಶ್ರೀರಂಗದಲ್ಲಿ ಗರುಡ ಜಯಂತಿ ಉತ್ಸವ. ಸಹಸ್ರಾರು ಜನ ಸ್ತ್ರೀಪುರುಷರು ನಾನಾ ಸ್ಥಳಗಳಿಂದ ಗರುಡ ವಾಹನನಾದ ಶ್ರೀ ರಂಗನಾಥ ಸ್ವಾಮಿಯ ದರ್ಶನಕ್ಕಾಗಿ ಕಿಕ್ಕಿರಿದಿದ್ದರು. ನಾರಾಯಣನ ಜಯ ಘೋಷಿಸಲು ಜಯಭೇರಿಗಳ ತಾಡನಧ್ವನಿ, ನೂರಾರು ಜನ ಬ್ರಾಹ್ಮಣರು ಸಾಲಾಗಿ ದ್ರಾವಿಡ ವೇದ ಘೋಷಮಾಡುತ್ತಾ ನಿಧಾನವಾಗಿ ಬರುತ್ತಿದ್ದಾರೆ. ಮಧ್ಯೆ ಶಂಖ, ಚಕ್ರ ಹಾಗೂ ತಿಲಕಗಳನ್ನೊಳಗೊಂಡ ದೊಡ್ಡಕೆಂಪುಧ್ವಜ. ಇದೆಲ್ಲವನ್ನು ನೋಡಿದರೆ ಭೂಸ್ವರ್ಗದಂತೆ ಕಾಣುತ್ತಿತ್ತು. ಸಾಮವೇದಿಗಳು, ಯಜುರ್ವೇದಿಗಳು, ವೇದಘೋಷ ಮಾಡುತ್ತಾ ಮಹಾದ್ವಾರವನ್ನು ದಾಟಿ ಮುಂದೆ ನಡೆದರು. ಹಿಂದೆ ಶೃಂಗರಿಸಿದ ಊರ್ಧ್ವಪುಂಡ್ರ ಧರಿಸಿರುವ ಆನೆಗಳು ಠೀವಿಯಿಂದ ಬರುತ್ತಿದ್ದವು. ಅವುಗಳ ಹಿಂದೆ ಎರಡೆರಡು ನಗಾರಿಗಳನ್ನೊತ್ತ ಬಸವಗಳು, ಅವುಗಳ ಹಿಂದೆ ಅಲಂಕರಿಸಿದ ಕುದುರೆಗಳ ಮೇಲೂ ಎರಡೆರಡು ನಗಾರಿಗಳು, ಅವುಗಳ ಹಿಂದೆ ಹರಿಭಜನೆ ಮಾಡುವ ಭಕ್ತರು ವಾದ್ಯವೃಂದದವರೊಡಗೂಡಿ ಹೀಗೆ ಭಜನೆ ಮಾಡಿಕೊಂಡು ಸ್ವಾಮಿಯ ಮುಂದೆ ಬರುತ್ತಿದ್ದಾರೆ.

**ರಾಗ-ಸಾವೇರಿ** **ಆದಿತಾಳ**

,ಭಜಿಸಿರಿರಂಗನ । ಭಜಿಸಿರಿರಂಗನ ।
,ಭಜಿಸಿರಿ ಗರುಡನ । ಹೆಗಲೇರಿ ಬರುವವನ ।।ಪ।।
,ಭಜಿಸಿ ಶ್ರೀಯೊಡಗೂಡಿ । ಮೆರೆವ ಶ್ರೀರಂಗನ ।
,ಸುಜನರೆಲ್ಲರು ಸೇರಿ । ಕುಣಿಕುಣಿದಾಡುತ ।।೧।।

,ಬರುತಲಿಹನುರಂಗ । ಪರಿಜನರ ಕೂಡಿ ।
,ಪುರಜನರಿಗೆ ತನ್ನ । ದರುಶನ ವೀಯಲು ॥
,ಪರಿಪರಿವಿಧವಲ್ಲಿ । ಸೇವಿಸೆ ಅವನ ।
,ದುರಿತಗಳೆಲ್ಲವ । ಪರಿಹರಿಸುವನು ॥೨॥

ಸ್ವಾಮಿ ನಾರಾಯಣ ಲಕ್ಷ್ಮೀ ಸಮೇತನಾಗಿ ಗರುಡನ ಹೆಗಲೇರಿ ಬರುತ್ತಿದ್ದಾನೆ. ದೇವದಾಸಿಯರು ಹರಿಭಜನೆ ಮಾಡುತ್ತಾ ಬರುತ್ತಿದ್ದಾರೆ. ಅರ್ಚಕರು ಊರ್ಧ್ವಪುಂಡ್ರ ಧರಿಸಿ ಬರುತ್ತಿದ್ದಾರೆ. ನಾನು ಮುಂದು ತಾನು ಮುಂದು ಎಂದು ನೂರಾರು ಭಕ್ತರು ಸ್ವಾಮಿಯನ್ನು ಹೊತ್ತು ಬರುತ್ತಿದ್ದಾರೆ. ಹೀಗೆ ಸ್ವಾಮಿಯು ಮಹಾದ್ವಾರದ ಮಂಡಪದಲ್ಲಿ ಬಿಜಯಿಸಿದನು. ಆ ಸಮಯದಲ್ಲಿ ನೂರಾರು ಜನರು ಕಾಯಿ ಹಣ್ಣು ಮುಂತಾಗಿ ತಟ್ಟೆಗಳಲ್ಲಿ ತಂದು ಸ್ವಾಮಿಗೆ ಭಕ್ತಿಯಿಂದ ಅರ್ಪಿಸಿದರು.

ಸ್ವಾಮಿಯ ಉತ್ಸವವು ಮುಂದುವರಿದಂತೆ ಪರಿವಾರವೂ ಮುಂದೆ ಮುಂದೆ ನಡೆಯಿತು.

ಬೀದಿಯಲ್ಲಿ ಎರಡು ಕಡೆಗಳಿಂದಲೂ ಮನೆ ಮನೆಗಳಿಂದ ಪೂಜಾ ಸಾಮಗ್ರಿಗಳನ್ನು ತಟ್ಟೆಗಳಲ್ಲಿ ಕೊಟ್ಟು ಗೃಹಿಣಿಯರು ಸ್ವಾಮಿಗೆ ಪೂಜಾ ಕೈಂಕರ್ಯವನ್ನು ಮಾಡಿಸುತ್ತಿದ್ದರು. ಹೀಗೆ ಎಲ್ಲೆಲ್ಲಿಯೂ ಭಕ್ತಿಯ ಹೊನಲು ಹರಿಯುತ್ತಿತ್ತು.

ಒಂದು ಕಡೆ ಮಾತ್ರ ವಿರುದ್ಧ ವಾತಾವರಣ ಕಂಡು ಬಂದಿತು. ಒಬ್ಬ ಸುಂದರ ಹೃಷ್ಟ-ಪುಷ್ಟ ವ್ಯಕ್ತಿ ಎಡಗೈಯಲ್ಲಿ ದೊಡ್ಡ ಛತ್ರಿ ಹಿಡಿದಿದ್ದನು; ಅದನ್ನು ತನಗಾಗಿ ಅಲ್ಲ, ತನ್ನೊಡನಿದ್ದ ವಿಶಾಲ ಕಣ್ಣುಗಳುಳ್ಳ ಸುಂದರ ಯುವತಿಯನ್ನು ಬಿಸಿಲ ತಾಪದಿಂದ ರಕ್ಷಿಸಲು, ಹಾಗೂ ಬಲಗೈಯಲ್ಲಿ ಬೀಸಣಿಗೆ ಹಿಡಿದು ಅವಳ ತಾಪ ಪರಿಹಾರಕ್ಕಾಗಿ ಬೀಸುತ್ತಿದ್ದನು. ಅವನ ಮನಸ್ಸು, ಹೃದಯ, ಕಣ್ಣುಗಳು ಅವಳಿಗೆ ಸೂರೆ ಹೋಗಿದ್ದವು. ಅವನಿಗೆ ಹೊರಜಗತ್ತಿನ ಅರಿವೇ ಇರಲಿಲ್ಲ. ಈ ವರ್ತನೆಯಿಂದ ಜನರ ಮುಂದೆ ನಗೆಗೀಡಾಗುವೆನೆಂಬ ಭಾವನೆಯೂ ಆತನಿಗಿರಲಿಲ್ಲ. ದುಂಬಿಯು ಹೊರಗಿನ ಪ್ರಪಂಚವನ್ನು ಮರೆತು ಹೂವಿನ ಮಕರಂದವನ್ನು ಹೀರುವಂತೆ ಇವನು ಆ ತರುಣಿಯ ಸೌಂದರ್ಯ ಸುಧೆಯನ್ನೇ ಸವಿಯುತ್ತಿದ್ದನು. ಮತ್ತೆ ನಾಚಿಕೆ, ತಾತ್ಸಾರ, ಭಯ ಇವುಗಳು ಅವನನ್ನು ಮುಟ್ಟುವುದೆಂತು?

ಅದೇ ಸಮಯಕ್ಕೆ ಕಾವೇರಿಯಲ್ಲಿ ಸ್ನಾನ ಮಾಡಿ ಶ್ರೀ ರಂಗನಾಥ ಸ್ವಾಮಿಯ ದರ್ಶನ, ಪೂಜಾದಿಗಳನ್ನು ಮುಗಿಸಿ, ಪಾಪಿಗಳನ್ನು ಮುಕ್ತಗೊಳಿಸುವ ಶ್ರೀ ರಾಮಾನುಜರು ದಾಶರಥಿಯ ಭುಜದ ಮೇಲೆ ತಮ್ಮ ಎಡಗೈ ಊರಿಕೊಂಡು ಮತ್ತೆ ಕೆಲವರು ಶಿಷ್ಯರೊಂದಿಗೆ ಬರುತ್ತಿದ್ದರು.

ಈ ದೃಶ್ಯವನ್ನು ನೋಡಿ ಕೂಡಲೇ ತಮ್ಮ ಶಿಷ್ಯನೊಬ್ಬನಿಗೆ ತಿಳಿಸಿದರು "ಹೇ ಮಗು, ಆತನು ಸ್ವಲ್ಪವೂ ನಾಚಿಕೆಯಿಲ್ಲದೆ ವರ್ತಿಸುತ್ತಿದ್ದಾನೆ, ಆತನನ್ನು ನನ್ನ ಬಳಿ ಕರೆ ತಾ".

ಆ ಶಿಷ್ಯನು ಆತನ ಬಳಿ ಹೋಗಿ ಹಲವಾರು ಬಾರಿ ಕೂಗಿದನು. ಕಡೆಗೆ ಅವನ ದೃಷ್ಟಿ ಶಿಷ್ಯನ ಮೇಲೆ ಬಿದ್ದಿತು. ಕೂಡಲೇ ಬ್ರಾಹ್ಮಣನ ಬಳಿ ಬಂದು ಕೈಮುಗಿದು ಕೇಳಿದ "ಈ ಸೇವಕನಿಗೆ ತಮ್ಮ ಆಜ್ಞೆಯೇನು?"

**ಬ್ರಾಹ್ಮಣ:** ಅಲ್ಲಿ ಯತಿರಾಜರು ನಿಂತಿದ್ದಾರೆ. ಅವರು ನಿಮ್ಮೊಡನೆ ಮಾತನಾಡಬೇಕಂತೆ ದಯಮಾಡಿ ಬನ್ನಿ".

ಯತಿರಾಜರ ಹೆಸರನ್ನು ಕೇಳುತ್ತಲೇ ಆತ ಯುವತಿಯ ಪ್ರೇಮದಿಂದ ದೂರನಾಗಿ, ಈ ಬ್ರಾಹ್ಮಣನನ್ನು ಹಿಂಬಾಲಿಸಿ ಯತಿರಾಜರ ಬಳಿ ಬಂದು ಪಾದಗಳಿಗೆ ನಮಸ್ಕರಿಸಿ ನಿಂತ.

**ಯತಿರಾಜರು:** ಎಲೈ ಮಗುವೆ, ಆ ಯುವತಿಯಲ್ಲಿ ನಿನಗೆ ದೊರೆತ ಅಮೃತ ಯಾವುದು? ಅದರಿಂದ ನೀನು ಈ ಜನಸ್ತೋಮದ ಮಧ್ಯೆ, ಸಿಗ್ಗು, ಜುಗುಪ್ಸೆ, ಭಯ, ಎಲ್ಲವನ್ನೂ ತೊರೆದು ಜನರ ನಗೆಗೀಡಾಗಿರುವೆ.

**ಯುವಕ:** ಮಹಾತ್ಮನ್! ಈ ಪ್ರಪಂಚದಲ್ಲಿ ಅನೇಕ ಸುಂದರ ವಸ್ತುಗಳಿವೆ. ಆದರೆ ಅವಳ ಕಣ್ಣುಗಳು ನನ್ನನ್ನು ಸೆರೆ ಹಿಡಿದಿವೆ. ಅವುಗಳನ್ನು ನೋಡಿದ ಮಾತ್ರದಿಂದಲೇ ನಾನು ಹುಚ್ಚನಾಗಿ ಬಿಡುತ್ತೇನೆ, ಮತ್ತೆ ನನ್ನ ಕಣ್ಣುಗಳನ್ನು ಬೇರೆಡೆಗೆ ತಿರುಗಿಸಲಾರೆ.

**ರಾಮಾನುಜರು:** ಆಕೆ ನಿನ್ನ ಪತ್ನಿಯೇ?

**ಯುವಕ:** ಇಲ್ಲ ಸ್ವಾಮಿ, ಆದರೆ ನಾನು ಅವಳನ್ನು ಬಿಟ್ಟು ಬೇರೆ ಯಾರನ್ನೂ ಪ್ರೀತಿಸುವುದಿಲ್ಲವೆಂದು ದೃಢಸಂಕಲ್ಪ ಮಾಡಿದ್ದೇನೆ.

**ಯತಿರಾಜರು:** ನಿನ್ನ ಹೆಸರೇನು ?

**ಯುವಕ:** ನನ್ನ ಹೆಸರು ಧನುರ್ದಾಸ. ನಾನು ನಿಚುಲನಗರದಿಂದ ಬಂದಿದ್ದೇನೆ. ಮಲ್ಲ ಯುದ್ಧದಲ್ಲಿ ನಿಪುಣ. ನನ್ನ ಯುವತಿಯ ಹೆಸರು ಹೇಮಾಂಬ.

**ಯತಿರಾಜರು:** ಧನುರ್ದಾಸ, ನಾನು ಇನ್ನೂ ಹೆಚ್ಚು ಸುಂದರವಾದ ಕಣ್ಣುಗಳನ್ನು ತೋರಿಸಿದರೆ ಈಕೆಯನ್ನು ಬಿಟ್ಟು ಅವುಗಳನ್ನು ಪ್ರೀತಿಸುವೆಯೇನು ?

**ಧನುರ್ದಾಸ:** ಪೂಜ್ಯರೇ, ಈ ಕಣ್ಣುಗಳಿಗಿಂತ ಹೆಚ್ಚು ಸೌಂದರ್ಯವುಳ್ಳ ಕಣ್ಣುಗಳು ದೊರೆತರೆ ಇವುಗಳನ್ನು ತ್ಯಜಿಸಿ ಅವುಗಳನ್ನು ಪ್ರೇಮಿಸಲು ಸಿದ್ಧ.

**ಯತಿರಾಜರು:** ನೋಡೋಣ, ಈ ರಾತ್ರಿ ನಮ್ಮ ಬಳಿ ಬಾ.

**ಧನುರ್ದಾಸ:** ತಮ್ಮ ಆಜ್ಞೆಯಂತೆ ಆಗಲಿ.

ಈ ರೀತಿ ಹೇಳಿ ತನ್ನ ಯುವತಿಯ ಬಳಿ ಬಂದು ಪುನಃ ತನ್ನ ಕಾರ್ಯದಲ್ಲಿ ನಿರತನಾಗಿ ಮುನ್ನಡೆದ.

ಸಂಜೆ ಶ್ರೀ ರಾಮಾನುಜರು ಧನುರ್ದಾಸನನ್ನು ಕರೆದುಕೊಂಡು ಶ್ರೀ ರಂಗನಾಥ ಸ್ವಾಮಿಯ ದೇವಸ್ಥಾನಕ್ಕೆ ಬಂದರು. ದ್ವಾರದಿಂದ ದ್ವಾರವನ್ನು ದಾಟುತ್ತಾ ಐದು ದ್ವಾರಗಳನ್ನು ದಾಟಿ ಶ್ರೀ ಲಕ್ಷ್ಮೀನಾರಾಯಣರ ಮುಂದೆ ಬಂದು ನಿಂತರು.

ಅರ್ಚಕರು ಗೌರವದಿಂದ ಯತಿರಾಜರನ್ನು ಬರ ಮಾಡಿಕೊಂಡರು.

ಕಮಲನಾಭನಾದ, ಆಕಾಶವರ್ಣದವನಾದ, ಶೇಷಶಯನನಾದ, ವಿಶ್ವದಾಧಾರನಾದ, ಭವಭಯಹರನಾದ, ಲಕ್ಷ್ಮೀಸಹಿತನಾದ ಶಾಂತಮೂರ್ತಿಯನ್ನು ಕರ್ಪೂರ ಹಚ್ಚಿ ನಿಧಾನವಾಗಿ ಆರತಿ ಮಾಡುತ್ತಾ ತೋರಿಸಿದರು.

ಆ ಕರ್ಪೂರದಾರತಿಯ ಪ್ರಕಾಶದಲ್ಲಿ ಸ್ವಾಮಿಯ ನೀಳಕಮಲಾಕ್ಷಗಳು ಜಾಜ್ವಲ್ಯಮಾನವಾಗಿ ಹೊಳೆದವು. ಅವುಗಳನ್ನು ನೋಡಿ ಭಕ್ತರು ಮಹದಾನಂದ ಭರಿತರಾದರು. ಆ ಸ್ವಾಮಿಯ ಸೌಂದರ್ಯಭರಿತ ನೇತ್ರಗಳಲ್ಲಿ ಧನುರ್ದಾಸನ ಕಣ್ಣುಗಳು ಸೆರೆಯಾದವು. ತಾನು ಪರಮಾನಂದವನ್ನನುಭವಿಸಿದನು. ಆತನ ಕಣ್ಣುಗಳಿಂದ ಆನಂದ ಬಾಷ್ಪಗಳ ಹೊಳೆಯೇ ಹರಿಯಿತು. ಅವನಿಗೆ ಹೇಮಾಂಬಳ ಕಣ್ಣುಗಳು ಸೂರ್ಯನ ಮುಂದೆ ನಕ್ಷತ್ರಗಳಂತೆ ಕಾಂತಿಹೀನವಾಗಿ ಕಂಡವು. ಆ ಅಲೌಕಿಕ ಆನಂದಸಾಗರದಲ್ಲಿ

ಮುಳುಗಿ ಹೋಗಿದ್ದವನು ಸ್ವಲ್ಪ ಕಾಲದ ನಂತರ ಈ ಪ್ರಪಂಚಕ್ಕೆ ಹಿಂದಿರುಗಿದನು. ಪಕ್ಕದಲ್ಲೇ ನಿಂತಿದ್ದ ರಾಮಾನುಜರಿಗೆ ನಮಸ್ಕರಿಸಿ ಹೇಳಿದನು ಓ, ಮಹಾತ್ಮರೇ! ವಿಶಾಲ ಹೃದಯಿಗಳಾದ ತಮ್ಮ ಅಮೋಘ ಕೃಪೆಯಿಂದ ಈ ಲಂಪಟ ಪ್ರಾಣಿಯಾದ ನಾನು ದೇವತೆಗಳಿಗೂ ಲಭ್ಯವಿಲ್ಲದ ಶಾಶ್ವತಾನಂದವನ್ನು ಪಡೆದೆ. ನನ್ನ ಕಣ್ತೆರಸಿದ ತಾವು ನನ್ನ ಪರಮಗುರು' ಎಂದು ಹೇಳಿ ಪಾದಗಳನ್ನು ಹಿಡಿದುಕೊಂಡನು.

ರಾಮಾನುಜರು ಪ್ರೀತಿಯಿಂದ ಆತನನ್ನು ಹಿಡಿದು ಮೇಲೆತ್ತಿ ಅಪ್ಪಿಕೊಂಡರು.

ಹೇಮಾಂಬ ವೇಶ್ಯೆಯಾದರೂ ಧನುರ್ದಾಸನನ್ನು ತನ್ನ ಪತಿಯೆಂದೇ ಭಾವಿಸಿದ್ದಳು. ಯತಿರಾಜರ ಕೃಪೆಯಿಂದ ಅವಳ ಪ್ರೇಮಿಯು ಸ್ವಾಮಿಯ ದರ್ಶನ ಪಡೆದ ಸುದ್ದಿ ಕೇಳಿ ಅವಳ ಆನಂದಕ್ಕೆ ಪಾರವೇ ಇಲ್ಲದಂತಾಯಿತು.

ಹೇಮಾಂಬಳೂ ಸಹ ಇಂದ್ರಿಯಗಳ ದಾಸತ್ವದಿಂದ ದೂರಾದಳು. ಯತಿರಾಜರ ಶರಣು ಹೋದಳು. ಯತಿರಾಜರು ಅವಳ ಪಾಪವನ್ನು ಹೋಗಲಾಡಿಸಿ, ವ್ಯಾಮೋಹದಿಂದ ದೂರಮಾಡಿದರು. ಅವರಿಬ್ಬರಲ್ಲಿ ಕಾಮುಕಪ್ರೇಮವನ್ನು ತೊಡೆದು ಹಾಕಿ ಶುದ್ಧಪ್ರೇಮವನ್ನು ಮೂಡಿಸಿದರು. ಈಗ ಅವರು ದಂಪತಿಗಳಂತೆ ಇದ್ದರೂ ಕಾಮುಕ ಪ್ರೇಮದಿಂದ ದೂರವಿದ್ದರು.

ಅವರಿಬ್ಬರೂ ನಿಚುಲನಗರವನ್ನು ಬಿಟ್ಟು ಶ್ರೀರಂಗಕ್ಕೆ ಬಂದು ಯತಿರಾಜರ ಮಠದ ಸಮೀಪದಲ್ಲೇ ಒಂದು ಬಾಡಿಗೆ ಮನೆಯಲ್ಲಿ ವಾಸಿಸ ತೊಡಗಿದರು.

ಧನುರ್ದಾಸನಲ್ಲಿ ಮೂಡಿಬಂದ ವೈರಾಗ್ಯ, ವಿನಯ, ಔದಾರ್ಯ, ಮಧುರ ಮಾತುಗಳಿಂದಾಗಿ ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು.

ಧನುರ್ದಾಸನ ಈ ಶ್ರೇಷ್ಠ ಗುಣಗಳಿಂದಾಗಿ ಯತಿರಾಜರು ಸ್ನಾನ ಮಾಡಿ ಮಠಕ್ಕೆ ಬರುವ ವೇಳೆಯಲ್ಲಿ ಆತನು ಅಂತ್ಯಜನಾದರೂ, ಆತನ ಕೈಹಿಡಿದುಕೊಂಡು ಬರುತ್ತಿದ್ದರು.

ಗುರುಗಳ ಈ ವರ್ತನೆ ಕೆಲವು ಶಿಷ್ಯರಿಗೆ ಸರಿದೋರಲಿಲ್ಲ.

ಒಂದು ದಿನ ರಾತ್ರಿ ಮಠದಲ್ಲಿದ್ದವರೆಲ್ಲಾ ಗಾಢನಿದ್ರೆಯಲ್ಲಿದ್ದಾಗ ಅವರ ಮೈ ಮೇಲಿದ್ದ ಬಟ್ಟೆಗಳಲ್ಲಿ ರಾಮಾನುಜರು ಕೇವಲ ಕೌಪೀನಗಳಿಗಾಗುವಷ್ಟು ಬಟ್ಟೆಗಳನ್ನು ಹರಿದು ಸಾಲಾಗಿ ಒಣಗು ಹಾಕಿದ್ದರು.

ಬೆಳಗಾಗ ಎದ್ದು ಅವರು ಒಬ್ಬರನ್ನೊಬ್ಬರು, ತಮ್ಮ ತಮ್ಮಲ್ಲೇ ಬೈದಾಡ ತೊಡಗಿದರು. ಕಡೆಗೆ ರಾಮಾನುಜರೇ ಅವರನ್ನು ಸುಮ್ಮನಾಗಿಸಿದರು.

ಮರುದಿನ ರಾತ್ರಿ ತಮ್ಮ ಶಿಷ್ಯರಿಗೆ ಆದೇಶ ನೀಡಿದರು – "ನೀವು ಧನುರ್ದಾಸನ ಮನೆಗೆ ಹೋಗಿ ಆತನ ಪ್ರೀತಿಪಾತ್ರಳ ಮೈಮೇಲಿನ ಒಡವೆಗಳನ್ನೆಲ್ಲಾ ಬಿಚ್ಚಿತನ್ನಿ. ನಾನು ಧನುರ್ದಾಸನನ್ನು ಮಠದಲ್ಲೇ ಇರಿಸಿಕೊಂಡು ಮಧ್ಯರಾತ್ರಿವರೆಗೂ ಮಾತನಾಡಿಸಿ ಕೊಂಡಿರುತ್ತೇನೆ".

ಶಿಷ್ಯರು ಗುರುಗಳ ಆಜ್ಞೆಯಂತೆ ಧನುರ್ದಾಸನ ಮನೆಗೆ ಹೋಗಿ ಹೇಮಾಂಬಳ ದೇಹದ ಒಂದು ಕಡೆಯ ಒಡವೆಗಳನ್ನೆಲ್ಲಾ ಕಳಚಿಕೊಂಡರು. ಹೇಮಾಂಬಳು ಎಚ್ಚರದಿಂದಿದ್ದಳು. ಹೊರಳಾಡಿದರೆ ಬ್ರಾಹ್ಮಣರು ಹೆದರಿ ಓಡಿ ಹೋಗುವರೆಂದು ತಿಳಿದು ಸುಮ್ಮನಿದ್ದಳು. ಆದರೆ ಮತ್ತೊಂದು ಕಡೆಯ ಆಭರಣಗಳನ್ನು ಸಹ ಕಳಚಿಕೊಂಡು ಹೋಗಲೆಂದು ಇನ್ನೊಂದು ಪಕ್ಕಕ್ಕೆ ಹೊರಳಿದಳು. ಆಗ ಬ್ರಾಹ್ಮಣರು ಎಚ್ಚರಗೊಂಡಳೆಂದು ತಿಳಿದು, ಕೈಗೆ ಸಿಕ್ಕಿದ ಆಭರಣಗಳನ್ನೇ ತೆಗೆದುಕೊಂಡು ಓಡಿದರು.

ಮಠ ಸೇರಿ ಆ ಶಿಷ್ಯರು ಗುರುಗಳಿಗೆ ಗುಟ್ಟಾಗಿ ಎಲ್ಲವನ್ನೂ ಹೇಳಿದರು. ಆಗ ರಾಮಾನುಜರು ಧನುರ್ದಾಸನನ್ನು ತನ್ನ ಮನೆ ಸೇರುವಂತೆ ಹೇಳಿ ಕಳುಹಿಸಿಕೊಟ್ಟರು.

ತಮ್ಮ ಶಿಷ್ಯರನ್ನು ಕರೆದು ಆತನನ್ನೇ ಹಿಂಬಾಲಿಸಿ ಹೋಗಿ ಅವರ ಮನೆಯಲ್ಲಿ ಏನು ಮಾತುಗಳನ್ನಾಡುತ್ತಾರೆಂಬುದನ್ನು ಕೇಳಿಸಿಕೊಂಡು ಬನ್ನಿ ಎಂದರು.

ಮನೆ ಸೇರಿದ ಮೇಲೆ ಧನುರ್ದಾಸ ಹೇಮಾಂಬಳ ಸ್ಥಿತಿಯನ್ನು ನೋಡಿ ವಿಚಾರಿಸಿದನು.

ಹೇಮಾಂಬಳು ನಡೆದ ಸಂಗತಿಯನ್ನು ವಿಶದವಾಗಿ ತಿಳಿಸಿದಳು. "ಆ ಸಮಯದಲ್ಲಿ ನಾನು ಮನಸ್ಸಿನಲ್ಲೇ ಪರಮಾತ್ಮನ ಹೆಸರನ್ನು ಸ್ಮರಿಸುತ್ತಾ ನಿಮ್ಮ ಬರವನ್ನೇ ಕಾಯುತ್ತಿದ್ದೆ" ಎಂದಳು. "ನಾನು ಗಾಢನಿದ್ರೆಯಲ್ಲಿರುವೆನೆಂದು ತಿಳಿದು ಅವರು ನನ್ನ ಒಂದು ಕಡೆಯ ಆಭರಣಗಳನ್ನು ತೆಗೆದುಕೊಂಡರು, ಮತ್ತೊಂದು ಕಡೆಯ ಆಭರಣಗಳನ್ನು ತೆಗೆದುಕೊಂಡು ಹೋಗಲೆಂದು ನಾನು ಪಕ್ಕಕ್ಕೆ ಹೊರಳಿದೆ. ಅವರು ಹೆದರಿ ಓಡಿ ಹೋದರು" ಎಂದು ಹೇಳಿದಳು.

ಅವಳ ಮಾತುಗಳನ್ನು ಕೇಳಿ ಧನುರ್ದಾಸ ಅವಳನ್ನು ದಂಡಿಸಿ ಹೇಳಿದನು – "ನಿನಗಿನ್ನೂ 'ನಾನು' ಎಂಬ ಅಹಂಕಾರ ಹೋಗಿಲ್ಲ. ನೀನು ಹೊರಳಿದ್ದು ತಪ್ಪು. ಇವು

ನನ್ನ ಆಭರಣಗಳು, ಅವುಗಳನ್ನು ನಾನು ಕೊಡುತ್ತಿದ್ದೇನೆ, ಎಂಬ ಅಹಂನಿಂದಾಗಿ ನೀನು ಈ ತುಚ್ಛ ಬಂಗಾರದ ವ್ಯಾಮೋಹದಿಂದ ದೂರಾಗಲು ಸಾಧ್ಯವಾಗಲಿಲ್ಲ. ನೀನು ಅಲುಗಾಡದೇ ಅದೇ ರೀತಿ ಭಗವಂತನ ಧ್ಯಾನದಲ್ಲಿದ್ದಿದ್ದರೆ, ಅವರು ನಿನ್ನ ಆಭರಣಗಳೆಲ್ಲವನ್ನೂ ಸುಲಿಗೆ ಮಾಡಿಕೊಂಡು ಹೋಗುತ್ತಿದ್ದರು. ನಿನ್ನ'ನಾನು, ನನ್ನದು' ಎಂಬ ಭಾವನೆ ಪೂರ್ಣನಾಶವಾಗಿಲ್ಲ" ಎಂದನು.

ತನ್ನ ತಪ್ಪನ್ನು ತಿಳಿದ ಹೇಮಾಂಬ ಕಣ್ಣೀರಿಡುತ್ತಾ "ಈ ಅಹಂಕಾರ ಮತ್ತೆ ನನ್ನನ್ನು ಸೇರದಿರುವಂತೆ ಹರಸಿ" ಎಂದು ಪತಿಯನ್ನು ಕೇಳಿಕೊಂಡಳು.

ಬ್ರಾಹ್ಮಣರು ಮಠಕ್ಕೆ ಬಂದು ದಂಪತಿಗಳೀರ್ವರ ಅಹಂ ವರ್ಜಿತ ಶುದ್ಧಮನಸ್ಸಿನ ಸ್ಥಿತಿಯನ್ನು ರಾಮಾನುಜರಿಗೆ ವರ್ಣಿಸಿದರು.

ರಾಮಾನುಜರು ಆರಾತ್ರಿ ಅವರನ್ನು ಮಲಗಲು ಹೇಳಿ ಕಳುಹಿಸಿದರು.

ಮರು ದಿನ ಬೆಳಗ್ಗೆ ಎಲ್ಲರನ್ನೂ ಸಂಬೋಧಿಸಿ ಹೇಳಿದರು. "ನೀವು ಶಾಸ್ತ್ರಾರ್ಥಗಳನ್ನು ತಿಳಿದವರು. ಬ್ರಾಹ್ಮಣರೆಂಬ ಅಹಂಕಾರಬೇರೆ. ಈಗ ಹೇಳಿ, ಕೇವಲ ಕೌಪೀನಕ್ಕಾಗುವಷ್ಟು ಬಟ್ಟೆಯನ್ನು ಕಳೆದುಕೊಂಡದ್ದಕ್ಕೆ ನಿಮ್ಮ ಬ್ರಾಹ್ಮಣ ವರ್ತನೆ ಹೇಗಿತ್ತು, ಧನುರ್ದಾಸ ಮತ್ತು ಆತನ ಹೆಂಡತಿ ಒಡವೆಗಳನ್ನು ಕಳೆದುಕೊಂಡರೂ ಅವರ ವರ್ತನೆ ಹೇಗಿತ್ತು?".

ಎಲ್ಲರೂ ನಾಚಿಕೆಯಿಂದ ತಲೆತಗ್ಗಿಸಿದರು. ಒಕ್ಕೊರಳಿನಿಂದ ಕೂಗಿ ಹೇಳಿದರು – "ಪೂಜ್ಯರೇ, ಧನುರ್ದಾಸನ ವರ್ತನೆ ಬ್ರಾಹ್ಮಣ ವರ್ತನೆಯಾಗಿತ್ತು, ನಮ್ಮದು ಘೃಣಿತ ವರ್ತನೆಯಾಗಿತ್ತು".

ಆಗ ಯತಿರಾಜರು ಬೋಧಿಸಿದರು – "ಹೇ ಮಕ್ಕಳೇ, ಒಳ್ಳೆಯತನಕ್ಕೆ ನಮ್ಮ ಹೃದಯದಲ್ಲಿರುವ ಒಳ್ಳೆಯ ಗುಣಗಳೇ ಕಾರಣ. ಜಾತಿಯಲ್ಲ. **ನ ಜಾತಿಃ ಕಾರಣಂ ಲೋಕೇ ಗುಣಾಃ ಕಲ್ಯಾಣ ಹೇತವಃ ।** ನಿಮ್ಮ ಜಾತ್ಯಭಿಮಾನವನ್ನು ದೂರ ಮಾಡಿ ಒಳ್ಳೆಯ ಗುಣಗಳನ್ನು ಗಳಿಸಲು ಪ್ರಯತ್ನಿಸಿ. ಜಾತಿ ಅಹಂಕಾರಕ್ಕೆ ತಾಯಿಯಾಗುವುದಾದರೆ ಅದಕ್ಕಿಂತ ಹಿತಶತ್ರು ಬೇರಿಲ್ಲ. ಆದರೆ ಅದು ನಿಮ್ಮನ್ನು ದೋಷದಿಂದ ರಕ್ಷಿಸುವುದಾದರೆ, ಅದಕ್ಕಿಂತ ಮಿಗಿಲಾದ ಮಿತ್ರನಿಲ್ಲ.

ಹೀಗೆ ಮಠದಲ್ಲಿ ಮುಂದೆ ಉತ್ತಮ ಸ್ಥಾನಕ್ಕೆ ಬರುವ ಬ್ರಾಹ್ಮಣರೆಲ್ಲರೂ ಆ ದಿನದಿಂದ ಒಂದು ಪಾಠವನ್ನು ಕಲಿತರು.

# 25

## ಕ್ರಿಮಿಕಂಠ

ಈ ಪ್ರಸಂಗದ ನಂತರ ರಾಮಾನುಜರಿಗೆ ಸುದ್ದಿ ಮುಟ್ಟಿತು. ಮಹಾಪೂರ್ಣರು, ಅವರ ಗುರುಗಳು, ಒಬ್ಬ ಶೂದ್ರನ ಶವಕ್ಕೆ ಅಗ್ನಿ ಸಂಸ್ಕಾರ ಮಾಡಿದರು. ಜನರು ಇದರಿಂದ ಅವರನ್ನು ಹೀನ ದೃಷ್ಟಿಯಿಂದ ಕಾಣುತ್ತಿದ್ದಾರೆ.

ನಿಜ ಸಂಗತಿ ಏನೆಂದು ತಿಳಿಯಲು ರಾಮಾನುಜರು ಮಹಾಪೂರ್ಣರ ಮನೆಗೆ ಧಾವಿಸಿದರು. ಅಲ್ಲಿ ತಿಳಿಯಿತು. ಅವರ ಬಂಧು ಬಳಗದವರೂ ಸಹ ಅವರನ್ನು ಬಿಟ್ಟು ಬಿಟ್ಟಿದ್ದಾರೆಂದು. ಅತ್ತುಲ್ಯೆ ತನ್ನ ಮಾವನ ಮನೆಯಿಂದ ಬಂದು ತಂದೆಯ ಸೇವೆ ಮಾಡುತ್ತಿದ್ದಳು. ರಾಮಾನುಜರು ಮಹಾಪೂರ್ಣರನ್ನು ಭೇಟಿ ಮಾಡಿ, ಅವರ ಪಾದಗಳಿಗೆರಗಿ ಕೇಳಿದರು –

"ತಾವು ಹೀಗೇಕೆ ಮಾಡಿದಿರಿ?"

**ಮಹಾಪೂರ್ಣರು:** ನಾನು ಹಾಗೆ ಮಾಡಿದ್ದು ನಿಜ. ಧರ್ಮಶಾಸ್ತ್ರಗಳ ಆಧಾರದ ಮೇಲೆ ಆ ರೀತಿ ಮಾಡಿದ್ದು ತಪ್ಪು. ಆದರೆ ಯಾವುದು ಧರ್ಮ?

**ಮಹಾಜನೋ ಯೇನ ಗತಃ ಸ ಪಂಥಾಃ ।** (ಮಹಾಭಾರತ)

ಮಹಾತ್ಮರು ಹಾಕಿ ಕೊಟ್ಟ ಮಾರ್ಗವೇ ಧರ್ಮಮಾರ್ಗ. ಶ್ರೀರಾಮಚಂದ್ರ ಪಕ್ಷಿರಾಜ ಜಟಾಯುವಿನ ದಹನ ಸಂಸ್ಕಾರ ಮಾಡಿದ, ಯುಧಿಷ್ಠಿರ ಕ್ಷತ್ರಿಯನಾಗಿ, ಶೂದ್ರನಾದ ವಿದುರನನ್ನು ಆರಾಧಿಸಿದ. ಅವರೆಲ್ಲಾ ಹಾಗೆ ಮಾಡಲು ಕಾರಣ? ಉತ್ತರ – ನಿಜವಾದ ಭಕ್ತನಿಗೆ ಜಾತಿಯ ಸಂಕೋಲೆ ಇಲ್ಲ. ಅಂತಹ ದೈವಭಕ್ತರು ಎಲ್ಲಾ ಜಾತಿ ಧರ್ಮಗಳಿಗೆ

ಕಿರೀಟಪ್ರಾಯರು; ರಾಮಚಂದ್ರ, ಯುಧಿಷ್ಠರರಂತೆ ಧರ್ಮವನ್ನು ಎತ್ತಿಹಿಡಿಯುವುದರಲ್ಲಿ ಯಾವ ದೋಷವೂ ಇಲ್ಲ. ನಾನು ಶವ ಸಂಸ್ಕಾರ ನಡೆಸಿದ ಭಕ್ತ ನನಗಿಂತಲೂ ಸಾವಿರ ಪಾಲು ಉತ್ತಮ. ಅಂತಹವನ ಅಂತ್ಯಕ್ರಿಯೆಯಿಂದ ನಾನು ಪುನೀತನಾದೆನೆಂದು ಭಾವಿಸುತ್ತೇನೆ.

ಮಹಾಪೂರ್ಣರು ಧರ್ಮದ ಬಗ್ಗೆ ಕೊಟ್ಟ ವಿವರಣೆಯಿಂದ ರಾಮಾನುಜರ ಸಂದೇಹಗಳು ದೂರವಾದವು. ಕೂಡಲೇ ಮಹಾಪೂರ್ಣರ ಪಾದಗಳಿಗೆರಗಿ ಕ್ಷಮೆ ಕೇಳಿದರು. ಅಲ್ಲಿಂದ ಮಠಕ್ಕೆ ಹಿಂದಿರುಗಿದರು.

ಒಮ್ಮೆ ಮಹಾಪೂರ್ಣರು ರಾಮಾನುಜರನ್ನು ನೋಡಲು ಬಂದರು. ಯತಿರಾಜರಿಗೆ ಅವರು ಗುರುಗಳಾಗಿದ್ದಾಗ್ಯೂ ಯತಿರಾಜರ ಪಾದಗಳಿಗೆ ನಮಸ್ಕರಿಸಿದರು.

ಇದನ್ನು ಕಂಡ ಶಿಷ್ಯರು ಯತಿರಾಜರನ್ನು ಪ್ರಶ್ನಿಸಿದರು "ಗುರುವರ್ಯಾ, ತಮ್ಮ ಗುರುಗಳೇ ತಮ್ಮ ಪಾದಗಳಿಗೆರಗಿದರೂ ತಾವು ಸುಮ್ಮನಿದ್ದಿರಿ. ಇದು ಸರಿಯೇ?"

**ರಾಮಾನುಜರು:** 'ಗುರುಣೋಕ್ತಪ್ರಕಾರೇಣ ವರ್ತನಂ ಶಿಷ್ಯಲಕ್ಷಣಂ । ಅತಸ್ತೇನೋಕ್ತ ಮಾರ್ಗೇಣ ವರ್ತೇಽಹಂ ನೈನಚಾನ್ಯಥಾ ॥ (ಪ್ರಪನ್ನಾಮೃತ)

"ಗುರುದೇವರು ನಿಜವಾದ ಶಿಷ್ಯನ ಸ್ವಭಾವ ಹೇಗಿರಬೇಕೆಂಬುದನ್ನು ಈ ರೀತಿ ವರ್ತಿಸಿ ತೋರಿಸಿದ್ದಾರೆ. ಅವರ ಮಾರ್ಗವನ್ನೇ ಅನುಸರಿಸುವ ನಾನು ಅದನ್ನು ಮೀರಿ ನಡೆಯಲಾರೆ".

ಶಿಷ್ಯರು ಮಹಾಪೂರ್ಣರನ್ನೂ ಇದೇ ರೀತಿ ಪ್ರಶ್ನಿಸಿದರು.

**ಮಹಾಪೂರ್ಣರು:** "ಯತಿರಾಜರಲ್ಲಿ ನಾನು ನನ್ನ ಗುರುಗಳಾದ ಯಾಮುನಾಚಾರ್ಯರನ್ನು ಕಂಡೆ. ಆದ್ದರಿಂದ ಅವರಿಗೆ ಎರಗಿದೆ". ಈ ರೀತಿ ಹೇಳಿ ಯತಿರಾಜರಲ್ಲಿ ಅಡಗಿರುವ ಅಸಾಮಾನ್ಯ ಮಹತ್ವದ ಅರಿವನ್ನು ಶಿಷ್ಯರಿಗೆ ಮಾಡಿಕೊಟ್ಟರು.

ರಾಮಾನುಜರು ಗೋಷ್ಠೀಪೂರ್ಣರನ್ನು ನಾರಾಯಣನೆಂದೇ ಭಾವಿಸಿದ್ದರು. ಗೋಷ್ಠೀಪೂರ್ಣರು ಒಮ್ಮೆ ಕೊಠಡಿಯ ಬಾಗಿಲನ್ನು ಮುಚ್ಚಿಕೊಂಡು ಒಳಗೆ ದೀರ್ಘಕಾಲ ಧ್ಯಾನದಲ್ಲಿ ಕುಳಿತಿದ್ದರು. ಧ್ಯಾನದಿಂದ ಬಹಿರ್ಮುಖರಾಗಿ ಹೊರಬಂದ ಮೇಲೆ ರಾಮಾನುಜರು ಅವರನ್ನು ಕೇಳಿದರು – "ಪೂಜ್ಯರೇ, ತಾವು ಯಾವ ಮಂತ್ರ ಹಾಗೂ ಯಾವ ದೇವರನ್ನು ಕುರಿತು ಧ್ಯಾನಿಸಿದಿರಿ?"

**ಗೋಷ್ಠೀಪೂರ್ಣರು:** ನನ್ನ ಸದ್ಗುರು ಯಾಮುನಾಚಾರ್ಯರ ದಿವ್ಯಪಾದಾರ್ಚನೆ ಹಾಗೂ ಅವರ ನಾಮ ಜಪವೇ ನನ್ನ ಗುರಿ. ಇದರಿಂದ ನನ್ನ ವ್ಯಥೆಗಳೆಲ್ಲಾ ದೂರಾಗುವುವು.

ಅಂದಿನಿಂದ ರಾಮಾನುಜರು ತಮ್ಮ ಗುರುಗಳು ನಾರಾಯಣನಿಗೂ ಮಿಗಿಲಾದವರೆಂದು ಭಾವಿಸಿದರು.

ಕೆಲವು ದಿನಗಳ ನಂತರ ಮಹಾಪೂರ್ಣರು ದೇಹತ್ಯಾಗ ಮಾಡಿದರು. ರಾಮಾನುಜರಿಗೆ ದುಃಖವಾಯಿತು. ಅದನ್ನು ಸಹಿಸಿಕೊಂಡು ಅತ್ತುಳ್ಳೆ ಹಾಗೂ ಇತರರನ್ನು ಸಂತೈಸಿದರು.

ಆ ಕಾಲದಲ್ಲಿ ಚೋಳರ ದೊರೆಯಾಗಿದ್ದ **ಕ್ರಿಮಿಕಂಠ** ಕಾಂಚೀಪುರ ರಾಜಧಾನಿಯಲ್ಲಿ ವಾಸವಾಗಿದ್ದನು. ಇಡೀ ಚೋಳರಾಜ್ಯವೇ ಶೈವ ಧರ್ಮವನ್ನು ಅನುಸರಿಸಬೇಕೆಂಬ ನಿರ್ಧಾರ ಕೈಗೊಂಡಿದ್ದನು. ಇವನು ಕ್ರೂರಿಯೂ ಹಾಗೂ ಸಂಕುಚಿತ ಮನೋಭಾವ ವುಳ್ಳವನೂ ಆಗಿದ್ದನು.

ಒಮ್ಮೆ ಅವನು ಯೋಚಿಸಿದನು, ರಾಮಾನುಜರನ್ನು ಶೈವ ಧರ್ಮದ ಹಿಡತಕ್ಕೆ ತಂದರೆ ಪೂರ್ಣ ಚೋಳರಾಜ್ಯವನ್ನೇ ಶೈವಧರ್ಮದ ರಾಜ್ಯವನ್ನಾಗಿಸಬಹುದು.

ಒಂದು ವೇಳೆ ಅವರು ವೈಷ್ಣವ ಧರ್ಮವನ್ನು ಬಿಡದೆ ಹೋದರೆ ಅವರನ್ನು ಕೊಂದಾದರೂ ಚೋಳ ರಾಜ್ಯದಲ್ಲಿ ಶೈವ ಧರ್ಮವನ್ನು ಹರಡಲೇಬೇಕೆಂದು ತೀರ್ಮಾನಿಸಿ, ರಾಮಾನುಜರನ್ನು ಶ್ರೀರಂಗದಿಂದ ಕರೆತರಲು, ಕೆಲವು ಬಲಿಷ್ಠರಾದ ಗೂಢಚಾರರನ್ನು ಕಳುಹಿಸಿಕೊಟ್ಟನು.

ಗೂಢಚಾರರು ಶ್ರೀರಂಗವನ್ನು ತಲುಪಿ ರಾಮಾನುಜರನ್ನು ಕಂಡು ಅವರಿಗೆ ರಾಜರನ್ನು ಭೇಟಿ ಮಾಡಬೇಕೆಂಬ ರಾಜಾಜ್ಞೆಯನ್ನು ತಿಳಿಸಿದರು.

ರಾಮಾನುಜರು ಬರುತ್ತೇನೆಂದು ಹೇಳಿ ಸಿದ್ಧತೆಗಾಗಿ ಒಳಗೆ ಹೋದರು.

ಒಳಗೆ ಕೂರೇಶರು ರಾಮಾನುಜರಲ್ಲಿ ಅರಿಕೆ ಮಾಡಿಕೊಂಡರು – "ರಾಜನು ತಮ್ಮನ್ನು ಕಂಚಿಗೆ ಕರೆಸುತ್ತಿರುವುದು, ತಮ್ಮ ಕೊಲೆಗಾಗಿ, ಇದರಿಂದ ಈ ಜಗತ್ತಿಗೇ ದೊಡ್ಡ ಹಾನಿಯಾಗುತ್ತದೆ. ತಾವು ನಮ್ಮೆಲ್ಲರಿಗೂ ಪರಮಾತ್ಮನ ಪಾದ ಸೇರಲು ದಾರಿ ತೋರುವವರಾಗಿದ್ದೀರಿ. ದಯವಿಟ್ಟು ತಾವು ಹೋಗಬೇಡಿ. ಕಾವಿಯನ್ನು ಧರಿಸಿ ನಾನು

ಆ ಗೂಢಚಾರರೊಂದಿಗೆ ಹೋಗುತ್ತೇನೆ. ತಾವು ನನ್ನ ಬಿಳಿ ಉಡುಪನ್ನು ಧರಿಸಿ ಈ ಕೂಡಲೇ ಶ್ರೀರಂಗದಿಂದ ತಪ್ಪಿಸಿಕೊಂಡು ಹೋಗಿ, ದಯವಿಟ್ಟು ಬೇಗ ಸಿದ್ಧರಾಗಿರಿ".

ರಾಮಾನುಜರು ಕ್ಷಣಕಾಲ ಕೂರೇಶರ ಸಲಹೆ ಬಗ್ಗೆ ಯೋಚಿಸಿದರು. ನಂತರ ಅದೇ ಸರಿಯೆಂದು ತೋರಿತು. ಕೂಡಲೇ ಕೂರೇಶರ ಬಿಳಿ ಉಡುಪನ್ನು ಧರಿಸಿ ಪಶ್ಚಿಮ ದಿಕ್ಕಿನ ಅರಣ್ಯ ಸೇರಿದರು. ಗೋವಿಂದರು ಮತ್ತೆ ಇತರೇ ಶಿಷ್ಯರು ಒಬ್ಬೊಬ್ಬರಾಗಿ ಅವರನ್ನು ಹಿಂಬಾಲಿಸಿದರು.

ಕೂರೇಶರು ಗುರುಗಳ ಕಾವಿಯನ್ನು ಧರಿಸಿ, ಕೈಗಳಲ್ಲಿ ದಂಡ, ಕಮಂಡಲು ಹಿಡಿದು ರಾಜಭಟರೊಂದಿಗೆ ಹೊರಟರು. ಇವರನ್ನೇ ರಾಮಾನುಜರೆಂದು ತಿಳಿದು ರಾಜಭಟರು ಕಂಚಿಗೆ ಕರೆದೊಯ್ದರು. ಕ್ರಿಮಿಕಂಠ ರಾಜನ ಮುಂದೆ ನಿಲ್ಲಿಸಿದರು.

ಇವರನ್ನೇ ರಾಮಾನುಜರೆಂದು ತಿಳಿದು ರಾಜ ಕ್ರಿಮಿಕಂಠ ಪ್ರಾರಂಭದಲ್ಲಿ ಬಹಳ ಎಚ್ಚರ ವಹಿಸಿದನು. ಇವರು ದೊಡ್ಡ ಮೇಧಾವಿಗಳು, ಚತುರರೆಂಬುದು ತಿಳಿದಿತ್ತು. ಹಿಂದೆ ತಾನು ಚಿಕ್ಕವನಾಗಿದ್ದಾಗ್ಗೆ ತನ್ನ ಅಕ್ಕನಿಗೆ ಹಿಡಿದಿದ್ದ ದೆವ್ವವನ್ನು ಇವರೇ ಬಿಡುಗಡೆ ಮಾಡಿದ್ದರೆಂಬುದನ್ನೂ ತಿಳಿದಿದ್ದನು.

**ಕ್ರಿಮಿಕಂಠ:** ಪೂಜ್ಯರೇ, ದಯವಿಟ್ಟು ಪೀಠವನ್ನಲಂಕರಿಸಿ, ತಮ್ಮಿಂದ ಧಾರ್ಮಿಕ ವಿಷಯಗಳ ಬಗ್ಗೆ ತಿಳಿದು ಕೊಳ್ಳುವ ಕುತೂಹಲದಿಂದ ತಮ್ಮನ್ನು ಇಲ್ಲಿಗೆ ಕರೆಸಿದ್ದೇನೆ. ನನ್ನ ಆಸ್ಥಾನದ ವಿದ್ವಾಂಸರೂ ಸಹ ತಮ್ಮೊಂದಿಗೆ ಚರ್ಚೆ ನಡೆಸಬೇಕೆಂದಿದ್ದಾರೆ. ಇದರಲ್ಲಿ ನಮ್ಮಂತಹವರ ಕರ್ತವ್ಯವೇನೆಂಬುದನ್ನು ತಿಳಿಸಿರಿ.

**ಕೂರೇಶರು:** ಎಲೈ ಮಹಾರಾಜನೇ, ಹಾಗೂ ವಿದ್ವಾಂಸರೇ, ಭಗವಾನ್ ವಿಷ್ಣುವೇ ಎಲ್ಲ ಭುವನಗಳ ರಕ್ಷಕ, ಅವನೊಬ್ಬನೇ ಎಲ್ಲ ಜೀವರಾಶಿಗಳ ಆರಾಧ್ಯ ದೈವ.

**ಕ್ರಿಮಿಕಂಠ:** (ಕುಪಿತನಾಗಿ) ನಿಮ್ಮನ್ನು ದೊಡ್ಡ ವಿದ್ವಾಂಸರು, ಶ್ರೇಷ್ಠಭಕ್ತರೆಂದು ಭಾವಿಸಿದ್ದೆ, ಆದರೆ ನೀವು ಪಾಖಂಡರು. ಏಕೆಂದರೆ ಜಗದ್ಗುರುವೂ ಸರ್ವನಾಯಕನೂ ಆದ ಶಂಕರನನ್ನು ಬಿಟ್ಟು ಆ ವಿಷ್ಣುವನ್ನು ಆರಾಧಿಸುವುದೆ. ಈಗ ನಮ್ಮ ಪಂಡಿತರು ಶೈವ ಸಿದ್ಧಾಂತವನ್ನು ಬೋಧಿಸುತ್ತಾರೆ. ಅದರಂತೆ ಶೈವ ಧರ್ಮಾವಲಂಬಿಗಳಾಗಿ, ಹಾಗಿಲ್ಲದೆ ಬೇರೆ ಗತ್ಯಂತರವಿಲ್ಲ.

ಪಂಡಿತರುಗಳು ಕೂರೇಶರೊಂದಿಗೆ ಶಾಸ್ತ್ರಾರ್ಥದ ಒಂದು ಮುಖವನ್ನು ಮಾತ್ರ ಬಹಳ ಕಾಲ ಚರ್ಚಿಸಿದರು. ಏನೂ ಪ್ರಯೋಜನವಾಗಲಿಲ್ಲ.

ಕಂದ॥ ಎಲೆ ಮೂರ್ಖ ರಾಮಾನುಜನೆ
ತೊಲಗಿಸೆಲೊ ನಿನ್ನಯ ಮನದಿಂ ಆವಿಷ್ಣುವಂ
ಮಲ್ಲಿಕಾರ್ಜುನನಂಭಜಿಸು
ಇಲ್ಲವಾದೊಡೆ ಸಿದ್ಧನಾಗು ಮೃತ್ಯುವನಪ್ಪಲ್ ॥

"ಎಲವೋ ನೀನೊಬ್ಬ ದೊಡ್ಡ ವಿದ್ಯಾಭಿಮಾನಿ, ನಿನ್ನ ಪ್ರಾಣ ಉಳಿಸಿ ಕೊಳ್ಳುವುದಾದರೆ, ಶಿವನಿಗಿಂತ ದೊಡ್ಡವನು ಯಾರೂಇಲ್ಲವೆಂಬುದನ್ನು ಒಪ್ಪಿಕೋ"

ನಿರ್ಭೀತರಾದ ಕೂರೇಶರು ನಗುತ್ತಾ ಹೇಳಿದರು.

**ಕೂರೇಶರು:** ಏಕೆ? ಶಿವನಿಗಿಂತ ದ್ರೋಣ ದೊಡ್ಡದು.

ಕೂರೇಶರ ಶಿವ, ದ್ರೋಣಗಳು ಅಳತೆಯ ಪರಿಮಾಣಗಳು. ದ್ರೋಣ ಎಂದರೆ 32 ಸೇರು. ಅದರರ್ಧ ಶಿವ. ಅಂದರೆ ಪಂಡಿತರುಗಳು ದೇವರುಗಳಲ್ಲಿ ದೊಡ್ಡವನು, ಚಿಕ್ಕವನು, ಎಂದು ವಾದಿಸುವುದರಬಗ್ಗೆ ಅಪಹಾಸ್ಯ ಮಾಡಿದರು. ಅವರ ಅಲ್ಪಮತಿಗೆ ವಿಷಾದಿಸಿದರು. ದೇವರಿಗೆ ಎಲ್ಲೆಯುಂಟೆ? ಸೀಮಾರಹಿತನು.

ಕೂರೇಶರಲ್ಲಿ ಜ್ಞಾನಕ್ಕೆ ತಕ್ಕ ಭಕ್ತಿಯೂ ಸಹ ಇತ್ತು, ರಾಮಾನುಜರಿಗೆ ಎಲ್ಲವನ್ನೂ ಅರ್ಪಿಸಿದ್ದರು. ಅಂದೆರ ಮನಸ್ಸು, ಪ್ರಾಣ, ಬುದ್ಧಿ, ಜ್ಞಾನ, ಬಲ, ಶರೀರ, ಆತ್ಮ

ತಾವು ರಾಜನ ಬಳಿಗೆ ಹೋಗುವುದು ಮರಣದ ದವಡೆಗೆ ಸಿಕ್ಕಿ ಬೀಳುವುದೆಂದು ತಿಳಿದಿದ್ದರೂ, ತಮ್ಮಗುರುಗಳ ಪ್ರಾಣವನ್ನುಳಿಸುವುದು ಅವರ ಮುಖ್ಯ ಗುರಿಯಾಗಿತ್ತು.

ನಿಜವಾದ ಭಕ್ತನೂ ಜ್ಞಾನಿಯೂ ಆದವನಿಗೆ ಯಾವ ಭಯದ ಚಿಂತೆಯೂ ಇರುವುದಿಲ್ಲ.

ಆನಂದಂ ಬ್ರಹ್ಮಣೋವಿದ್ವಾನ್ ನ ಬಿಭೇತಿ ಕುತಶ್ಚನೇತಿ ।
'ಬ್ರಹ್ಮಾನಂದವನ್ನು ಪಡೆವಗೆ ಭಯವೆಲ್ಲಿಯದು'

ಕೂರೇಶರು ಮನದಲ್ಲೇ ಪರಮಾತ್ಮನು ತನ್ನ ಮೇಲೆ ಕೃಪೆ ತೋರಿದ್ದಾನೆಂದು ತಿಳಿದು ಯಾಮುನ ಮುನಿಗಳ ಅಮೃತ ವಾಣಿಯನ್ನು ಮೆಲುಕು ಹಾಕಿದರು.

**ನಮೋ ನಮೋ ವಾಙ್ಮನಸಾತಿಭೂಮಯೇ ।**
**ನಮೋ ನಮೋ ವಾಙ್ಮನಸೈಕಭೂಮಯೇ ।**
**ನಮೋನಮೋಽ ನಂತಮಹಾವಿಭೂತಯೇ**
**ನಮೋ ನಮೋಽ ನಂತದಯೈಕಸಿಂಧವೇ ॥**
**(ಸ್ತೋತ್ರರತ್ನ 21)**

**ರಾಗ-ಕಾನಡ** **ರೂಪಕ**

,ನಮಿಸುವೆನಮಿ । ಸುವೆವಾಙ್ಮನೋತೀತನೆ ನಿನಗೆ ।
,ನಮಿಸುವೆ ನಮಿ । ಸುವೆ ವಾಙ್ಮನಾಧಾರನೆ ನಿನಗೆ ॥ಪ॥
,ನಮಿಸುವೆ ನಮಿ । ಸುವೆ ಮಹಾವಿಭೂತಿಯೆ ನಿನಗೆ ।
,ನಮಿಸುವೆ ನಮಿ । ಸುವೆ ದಯೈಕಸಿಂಧುವೆ ನಿನಗೆ ॥೧॥

ಕಡೆಗೆ ಕ್ರಿಮಿಕಂಠನು "ಶಿವನ ದ್ವೇಷಿಯಾದ ಇವನನ್ನು ಈ ಕೂಡಲೇ ಕರೆದುಕೊಂಡು ಹೋಗಿ ಈತನ ಕಣ್ಣುಗಳನ್ನು ತೆಗೆದು ಹಾಕಿರಿ" ಎಂದು ಅಜ್ಞಾಪಿಸಿದನು.

ಹಿಂದೆ ನನ್ನ ಸಹೋದರಿಗೆ ಹಿಡಿದಿದ್ದ ದೆವ್ವವನ್ನು ಬಿಡುಗಡೆ ಮಾಡಿದ್ದಕ್ಕಾಗಿ ಪ್ರಾಣಸಹಿತ ಬಿಟ್ಟಿದ್ದೇನೆ.

ರಾಜಾಜ್ಞೆಯಂತೆ ಕೂರೇಶರನ್ನು ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಗಿ ರಾಜಭಟರು ಅವರ ಕಣ್ಣುಗಳನ್ನು ಕಿತ್ತರು.

ಕೂರೇಶರು ಆಗ ಉಂಟಾದ ನೋವನ್ನು ಸಹಿಸಿಕೊಂಡು ದೇವರಲ್ಲಿ ಮೊರೆಯಿಟ್ಟರು. ಭಗವಾನ್ ನಿನ್ನ ಕೃಪೆಯಿಂದ ಗುರುಗಳು ಈ ಹಿಂಸೆಯಿಂದ ದೂರವಾದರು – ಎಂದು ಸಂತೋಷಗೊಂಡು ಕಣ್ಣುಗಳನ್ನು ಕಿತ್ತವರಿಗೆ ಪ್ರೀತಿಯಿಂದ ನಮಸ್ಕರಿಸಿ ಹೇಳಿದರು – "ನೀವು ನನ್ನ ಸಹೋದರರು. ನಿಮ್ಮ ಕೃಪೆಯಿಂದ ನಾನು ನನ್ನ ಇಬ್ಬರು ಶತ್ರುಗಳಿಂದ ಮುಕ್ತನಾದೆ. ಈ ಎರಡು ಕಣ್ಣುಗಳು ಸೃಷ್ಟಿಕರ್ತನತ್ತ ನನ್ನ ಮನಸ್ಸನ್ನು ತೆಗೆದುಕೊಂಡು ಹೋಗದೆ ಮಾಯಾವೃತವಾದ, ನಾಶಭೂತವಾದ ಜಗತ್ತಿನ ಕಡೆ ಒಯ್ಯುತ್ತಿದ್ದವು. ದೇವರು ನಿಮಗೆ ಒಳ್ಳೆಯದನ್ನು ಮಾಡಲಿ".

ಕೂರೇಶರ ಆನಂದವನ್ನು ನೋಡಿ, ಕ್ರೂರಿಗಳಾದ ತಮ್ಮನ್ನು ಆಶೀರ್ವದಿಸಿದ್ದನ್ನು ನೋಡಿ, ಆ ಘಾತಕರು ಬಹಳ ನೊಂದುಕೊಂಡರು. ದಾರಿಯಲ್ಲಿ ಹೋಗುತ್ತಿದ್ದ ಒಬ್ಬ

ಭಿಕ್ಷುಕನನ್ನು ಕರೆದು ಈ ಸಾಧುಗಳನ್ನು ಶ್ರೀರಂಗಕ್ಕೆ ಕರೆದುಕೊಂಡು ಹೋಗು ಎಂದು ತಿಳಿಸಿ, ಆತನಿಗೆ ಕೊಂಚ ಹಣವನ್ನು ಕೊಟ್ಟು ಕಳುಹಿಸಿದರು.

ಈ ಘಟನೆಯ ನಂತರ ಕ್ರಿಮಿಕಂಠನು ಗುಣಪಡಿಸಲಾಗದ ರೋಗಕ್ಕೆ ತುತ್ತಾಗಿ ಅಸುನೀಗಿದನು. ಹರಿ–ಹರರಿಬ್ಬರೂ ಒಬ್ಬನೇ ಪರಮಾತ್ಮನ ಎರಡು ಮುಖಗಳೆಂಬುದು ಕ್ರಿಮಿಕಂಠನಿಗೆ ತಿಳಿಯದಾಯಿತು, ವೈಷ್ಣವ ದ್ವೇಷಿಯಾದ. ಹೀಗೆಯೇ ವೈಷ್ಣವರೂ ಸಹ ಅಜ್ಞಾನದಿಂದಾಗಿ ಸಂಕುಚಿತ ಮನೋಭಾವವುಳ್ಳವರಾಗುತ್ತಾರೆ.



# 26

# ವಿಷ್ಣುವರ್ಧನ

ರಾಮಾನುಜರು ತಮ್ಮ ಪ್ರಮುಖ ಶಿಷ್ಯರುಗಳಾದ ಗೋವಿಂದರು, ದಾಶರಥಿಗಳು, ಧನುರ್ದಾಸರು ಹಾಗೂ ಇತರೇ ಶಿಷ್ಯರುಗಳೊಂದಿಗೆ ಕಾಡಿನಲ್ಲಿ ಸತತವಾಗಿ ಹಗಲು ರಾತ್ರಿಯೆನ್ನದೆ ಕಲ್ಲು ಮುಳ್ಳೆನ್ನದೆ, ಹಸಿವು ತೃಷೆಗಳೆನ್ನದೆ ಎರಡು ದಿನಗಳು ನಡೆದರು.

ಕಡೆಯಲ್ಲಿ ದೇಹ ಶ್ರಮ ಹೆಚ್ಚಾಗಿ ಕಾಲುಗಳು ಶಕ್ತಿ ಗುಂದಿದಾಗ ಒಂದು ಬಂಡೆಯ ಮೇಲೆ ಎಲ್ಲರೂ ಮಲಗಿಬಿಟ್ಟರು.

ಪಕ್ಕದಲ್ಲೇ ಅಂತ್ಯಜರ ಒಂದು ಹಳ್ಳಿಯಿತ್ತು. ಆ ಜನರು ಜಾತಿಯಲ್ಲಿ ಕೀಳಾದರೂ, ಹೃದಯದಿಂದ ಶ್ರೀಮಂತರು. ಬೆಳಗಾದರೂ ಎಚ್ಚರವೇ ಇಲ್ಲದಂತೆ ಮಲಗಿದ್ದ ಈ ಬ್ರಾಹ್ಮಣರುಗಳನ್ನು ನೋಡಿ, ಕೂಡಲೇ ಹಣ್ಣು ಹಂಪಲುಗಳನ್ನು ತಂದಿಟ್ಟರು. ಛಳಿಯಿಂದ ರಕ್ಷಿಸಲು ಕಟ್ಟಿಗೆಗಳನ್ನು ತಂದು ಬೆಂಕಿ ಹತ್ತಿಸಿದರು. ಮಲಗಿರುವವರು ಎಚ್ಚರ ಗೊಳ್ಳುವವರೆಗೂ ಕಾದು ಕುಳಿತರು.

ರಾಮಾನುಜರು, ಶಿಷ್ಯರು ಎಲ್ಲರೂ ನಿದ್ರೆಯಿಂದ ಎದ್ದರು. ಮುಗ್ಧಜನರನ್ನು ನೋಡಿ, ಅವರು ತಂದಿಟ್ಟಿದ್ದ ಹಣ್ಣು ಹಂಪಲುಗಳನ್ನು ನೋಡಿ ಸಂತೋಷಪಟ್ಟರು. ಎಲ್ಲವೂ ಶ್ರೀಹರಿಯ ಕೃಪೆಯೆಂದು ತಿಳಿದು ಕೂಡಲೇ ಪಕ್ಕದಲ್ಲಿ ಹರಿಯುತ್ತಿದ್ದ ಹೊಳೆಯಲ್ಲಿ ಸ್ನಾನಾದಿಗಳನ್ನು ಮುಗಿಸಿ, ಆ ಹಣ್ಣುಗಳನ್ನು ಶ್ರೀ ಹರಿಗೆ ಸಮರ್ಪಿಸಿ ನಂತರ ಆನಂದದಿಂದ ಭುಂಜಿಸಿದರು.

## ಕಲ್ಯಾಣಿ

ಕಂದ॥ ಹರಿಜನರೆ, ಆತಿಥ್ಯವಂ
ಪರಿಗರ್ಪಿಸಿ, ನಿಮ್ಮಯ, ಭುಂಜಿಸಿದೆವು ಮುದದಿಂ
ಹರಿಜನರೆನಿಸಿದ ನಿಮ್ಮಯ
ಪರಮಸೌಜನ್ಯವಕಂಡರಸುವೆ ಹರಿಕೃಪೆಯಂ ॥

ಎಂದು ಅವರನ್ನು ಆಶೀರ್ವದಿಸಿ, ಅವರಲ್ಲಿ ಒಬ್ಬಿಬ್ಬರನ್ನು ಮಾರ್ಗದರ್ಶನಕ್ಕಾಗಿ ಕರೆದುಕೊಂಡು ರಾಮಾನುಜರು ಎಲ್ಲರೊಡಗೂಡಿ ಮುಂದೆ ಹೊರಟರು.

ಮುಂದೆ ಒಂದು ಹಳ್ಳಿ ಸಿಕ್ಕಿತು. ಆ ವೇಳೆಗೆ ಮಧ್ಯಾಹ್ನವಾಗಿತ್ತು. ಒಬ್ಬ ಬ್ರಾಹ್ಮಣರ ಮನೆಗೆ ಹೋದರು. ಮನೆಯಲ್ಲಿ ಯಜಮಾನರು ಇರಲಿಲ್ಲ. ಆದರೆ ಅವರ ಹೆಂಡತಿ ಚೇಲಾಂಚಲಾಂಬ ತಮ್ಮ ಮನೆಗೆ ಅಷ್ಟೊಂದು ಜನ ವೈಷ್ಣವರು ಒಟ್ಟಿಗೇ ಬಂದದ್ದನ್ನು ನೋಡಿ ಬಹಳ ಸಂತೋಷಪಟ್ಟಳು. ಅವರನ್ನು ತುಂಬು ಹೃದಯದಿಂದ ಸ್ವಾಗತಿಸಿದಳು.

ಆ ವೇಳೆಗೆ ಭಿಕ್ಷೆಗೆಂದು ಹೋಗಿದ್ದ ಶ್ರೀ ರಂಗದಾಸರು, ಮನೆಯ ಯಜಮಾನರು, ಭಿಕ್ಷೆ ತೆಗೆದುಕೊಂಡು ಬಂದರು. ಇಷ್ಟೊಂದು ಜನ ವೈಷ್ಣವ ಅಭ್ಯಾಗತರನ್ನು ನೋಡಿ ಆನಂದದಿಂದ ಹಿಗ್ಗಿದರು. ಹಾಡುತ್ತಾ ಕುಣಿದಾಡಿದರು.

**ರಾಗ-ಶ್ಯಾಮ(ಸಾಮ)** **ಆದಿತಾಳ**

ದಾಸರೋ ಹರಿದಾಸರೋ ॥ಪ॥
ದಾಸರೋ ಹರಿದಾಸರೋ ॥ಅ॥
ದಾಸರೆನಿಸಿ ಧರ್ಮಹಿಡಿದು ।
ಆಸೆಕಡಿದು ವಾಸತೊರೆದು ॥
ಕಾಸುಕವಡಿಕಾಲಿಲೊದ್ದು ।
ಈಶನೊಲಿಸಿಕೊಂಬುವಂತ ॥೧॥

ತನುವನ ತಂಬೂರಿ ಮಾಡಿ ।
ಪ್ರಣವನಾದ ಸ್ವರದಿ ಹಾಡಿ ।
ಚಿನುಮಯಾತ್ಮನ ಪಾಡುತ್ತ ।
ಮನೆ ಮನೆಯ ಭಿಕ್ಷೆಬೇಡುವಂಥ ॥೨॥

ವರಶ್ರೀಮುಖ ಮುದ್ರೆಯನ್ನು ।
ಧರಿಸಿ ಎನ್ನಶಿರದ ಮೇಲೆ ॥
ಕರವನಿಟ್ಟು ಹರಸಿದಂತ ।
ಗುರುಶ್ರೀ ರಾಮಾನುಜರ ॥೩॥
(ಶಿಶುನಾಳ ಶರೀಫರ ಕ್ಷಮೆಬೇಡಿ)

ನಂತರ ರಾಮಾನುಜರ ಪಾದಗಳಿಗೆರಗಿದರು. ಅಷ್ಟರಲ್ಲಿ ಅವರ ತತ್ಪರಳಾದ ಪತ್ನಿಯು ಶ್ರೀ ಮಹಾವಿಷ್ಣುವಿಗೆ ಅರ್ಪಿಸಲು ಪ್ರಸಾದವನ್ನು ಸಿದ್ಧಪಡಿಸಿದಳು. ಸ್ವಾಮಿಗೆ ಭಕ್ತಿಯಿಂದ ನೈವೇದ್ಯ ಮಾಡಿ, ಪವಿತ್ರ ಪ್ರಸಾದವನ್ನು ಬಂದಿದ್ದ ವೈಷ್ಣವರೆಲ್ಲರಿಗೂ ಉಣಬಡಿಸಿದಳು. ರಾಮಾನುಜರು ತಮ್ಮ ಶಿಷ್ಯರೊಂದಿಗೆ ಅಲ್ಲಿಯೇ ಎರಡು ದಿನಗಳು ತಂಗಿ ವಿಶ್ರಾಂತಿ ಪಡೆದರು.

ಶ್ರೀ ರಂಗದಾಸರಿಗೂ ಅವರ ಪತ್ನಿಗೂ ವೈಷ್ಣವ ದೀಕ್ಷೆ ಕೊಟ್ಟರು.

ಅಂತ್ಯಜರನ್ನು ಹಿಂದಕ್ಕೆ ಕಳುಹಿಸಿ ಶ್ರೀ ರಂಗದಾಸರೊಡಗೂಡಿ ಬೆಳಗಾಗ ಎಲ್ಲರೂ ಪ್ರಯಾಣ ಬೆಳಸಿದರು. ರಾತ್ರಿಯಾಗುವ ವೇಳೆಗೆ ವಹ್ನಿಪುಷ್ಕರಣಿಯನ್ನು ಸೇರಿದರು. ಅಲ್ಲಿ ಎರಡು ದಿನ ತಂಗಿದರು.

ಅಲ್ಲಿಂದ ಯತಿರಾಜರು ಶ್ರೀ ರಂಗದಾಸರನ್ನು ಹಿಂದಕ್ಕೆ ಕಳುಹಿಸಿ, ಶಿಷ್ಯರೊಡಗೂಡಿ ಸಾಲಗ್ರಾಮ ಹಳ್ಳಿಗೆ ಬಂದರು. ಅಲ್ಲಿ **ಆಂಧ್ರಪೂರ್ಣ** ಎಂಬುವರ ಅತಿಥಿಗಳಾದರು. ಆಂಧ್ರಪೂರ್ಣರು ಬ್ರಾಹ್ಮಣರು. ದೊಡ್ಡತಪಸ್ವಿಗಳು. ಅವರ ವೈರಾಗ್ಯಭಕ್ತಿಗಳನ್ನು ನೋಡಿ, ವಿವಾಹ ಬಂಧನದಿಂದ ಮುಕ್ತರಾಗಿದ್ದಾರೆಂಬುದನ್ನು ತಿಳಿದು, ರಾಮಾನುಜರು ವೈಷ್ಣವ ದೀಕ್ಷೆ ಕೊಟ್ಟು ಅವರನ್ನು ತನ್ನ ಆಪ್ತದಾಸನನ್ನಾಗಿ ಮಾಡಿಕೊಂಡರು.

ಅಂದಿನಿಂದ ಆಂಧ್ರಪೂರ್ಣರು ಯತಿರಾಜರ ಹೃತ್ಪೂರ್ವಕ ಸೇವೆ ಮಾಡ ತೊಡಗಿದರು.

ಕೆಲವು ದಿನಗಳ ನಂತರ ಎಲ್ಲರೂ ನೃಸಿಂಹಕ್ಷೇತ್ರಕ್ಕೆ ಬಂದರು.

ಆಂಧ್ರಪೂರ್ಣರ ಮಾತಿನಂತೆ ಭಕ್ತಗ್ರಾಮದಲ್ಲಿದ್ದ ದೊಡ್ಡ ಭಕ್ತರಾಗಿದ್ದ ಪೂರ್ಣರನ್ನು ನೋಡಲು ಹೋದರು. ಅಲ್ಲಿ ಒಂದು ದಿನ ಅವರ ಅತಿಥಿಗಳಾಗಿದ್ದರು.

ನಂತರ ಆ ಪ್ರಾಂತದ ರಾಜನಾಗಿದ್ದ **ವಿಟ್ಠಲದೇವ (ಬಿಟ್ಟಿದೇವ)**ನ ಅತಿಥಿಗಳಾದರು. ರಾಜ ಜೈನ ಧರ್ಮಾವಲಂಬಿಯಾಗಿದ್ದನು. ನಿತ್ಯವೂ ಸಾವಿರಾರು ಶ್ರಮಣರನ್ನು (ಜೈನಸನ್ಯಾಸಿ) ಉಪಚರಿಸುತ್ತಿದ್ದನು. ಆ ಸಮಯದಲ್ಲಿ ರಾಜಕುಮಾರಿಗೆ ದೆವ್ವ ಹಿಡಿಯಿತು. ಅದನ್ನು ಬಿಡಿಸುವಲ್ಲಿ ಅನೇಕ ವೈದ್ಯರು ಜೈನ ಸನ್ಯಾಸಿಗಳು ವಿಫಲರಾದರು.

ಪೂರ್ಣರ ಮನೆಗೆ ಕೆಲವು ಜನ ವೈಷ್ಣವರು ಬಂದಿದ್ದಾರೆಂಬ ಸುದ್ಧಿ ವಿಟ್ಠಲದೇವನಿಗೆ ತಿಳಿಯಿತು.

ನೋಡೋಣವೆಂದು ತನ್ನ ಕೆಲ ಪಂಡಿತರನ್ನು ಪೂರ್ಣರ ಮನೆಗೆ ಕಳುಹಿಸಿ ಅವರನ್ನು ಅರಮನೆಗೆ ಕರೆತರುವಂತೆ ಆಜ್ಞಾಪಿಸಿದನು.

ಪಂಡಿತರಿಂದ ವಿಷಯ ತಿಳಿದು ರಾಮಾನುಜರು ಅವರೊಂದಿಗೆ ಅರಮನೆಗೆ ಬಂದರು. ಅವರು ರಾಜಕುಮಾರಿಯನ್ನು ದಿಟ್ಟಿಸಿ ನೋಡಿದರು, ದೆವ್ವ ಓಡಿಹೋಯಿತು.

ಇದನ್ನು ಕಂಡ ವಿಟ್ಠಲದೇವನಿಗೆ ಬಹಳ ಆಶ್ಚರ್ಯವಾಯಿತು. ತತ್ಪರಿಣಾಮವಾಗಿ ರಾಮಾನುಜರಲ್ಲಿ ಅವನಿಗೆ ಭಕ್ತಿಮೂಡಿತು.

ರಾಮಾನುಜರಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸಿ, ವೈಷ್ಣವ ಧರ್ಮದ ಬಗ್ಗೆ ತಿಳಿಯ ಹೇಳಬೇಕೆಂದು ಅರಿಕೆ ಮಾಡಿಕೊಂಡನು.

ಮಧುರ ಸ್ವಭಾವದವರೂ, ಸಂಪೂರ್ಣ ಭಕ್ತಿಯ ಪ್ರತೀಕರೂ, ಅಪೌರುಷೇಯ ಶಕ್ತಿಯುಳ್ಳವರೂ, ಅಲೌಕಿಕ ಸೌಂದರ್ಯವುಳ್ಳವರೂ, ಎಲ್ಲರ ಹೃದಯಾಕರ್ಷಕರು, ಚಾರವಾಕರಿಗೆ ಕಂಟಕಪ್ರಾಯರೂ, ಜೀವ ರಕ್ಷಕರೂ ಆಗಿದ್ದ ರಾಮಾನುಜರು ತಮ್ಮ ಧರ್ಮದ ವ್ಯಾಖ್ಯಾನವನ್ನು ಬಹಳ ತಿಳಿಯಾದ ಭಾಷೆಯಲ್ಲಿ ಮಾಡಲು ಪ್ರಾರಂಭಿಸಿದರು.

ದೇವರಲ್ಲಿ ಆಸ್ಥೆಯಿಲ್ಲದ ಕಾರಣ ರಾಜನು ಶ್ರಮಣರನ್ನು ಚರ್ಚಾಗೋಷ್ಠಿಗೆ ಬರಮಾಡಿಕೊಂಡನು. ಸಾವಿರಾರು ಜೈನರು ಬಂದು ಸೇರಿದರು.

ರಾಮಾನುಜರು ವೈಷ್ಣವ ಧರ್ಮದ ವ್ಯಾಖ್ಯಾನವನ್ನು ಪ್ರಾರಂಭಿಸಿದರು.

ಕೀಳು ಸ್ವಭಾವದ ಕೆಲವರು ಜೈನ ಪಂಡಿತರು ಕೂಗಾಟ, ಕಿರುಚಾಟದಿಂದ ಗದ್ದಲ ಮಾಡತೊಡಗಿದರು.

ಆದರೆ ವಿಟ್ಠಲದೇವನ ಆಜ್ಞೆಯಂತೆ ಅವರನ್ನು ಸಭೆಯಿಂದ ಹೊರದೂಡಲಾಯಿತು.

ಯತಿರಾಜರು ಉಚ್ಚ ಹಾಗೂ ಗಂಭೀರ ಧ್ವನಿಯಲ್ಲಿ ವೈಷ್ಣವ ಸಿದ್ಧಾಂತದ ಬಗ್ಗೆ ಹೇಳ ಬೇಕಾದುದನ್ನೆಲ್ಲಾ ಹೇಳಿ ಮುಗಿಸಿದರು.

ಯತಿರಾಜರು ವ್ಯಾಖ್ಯಾನವನ್ನು ಮುಗಿಸುತ್ತಲೇ ಶ್ರಮಣರಲ್ಲೊಬ್ಬರು ಎದ್ದುನಿಂತು ಅವರ ಸಿದ್ಧಾಂತವನ್ನು ವಿರೋಧಿಸಲು ಹೊರಟರು. ಆದರೆ ಅವರು ತನ್ನ ಪ್ರತಿವಾದಿಯ ಹೇಳಿಕೆಗಳನ್ನು ಪ್ರತಿಭಟಿಸದೆ, ಸನಾತನ ಧರ್ಮವನ್ನು ವಿರೋಧಿಸ ತೊಡಗಿದರು.

ಇದನ್ನು ಕಂಡ ರಾಜಬಿಟ್ಟಿದೇವನು ಹೇಳಿದನು – "ಪೂಜ್ಯರೇ, ತಾವು ದೊಡ್ಡ ವಿದ್ವಾಂಸರು. ಬೇರೊಂದು ಧರ್ಮವನ್ನು ಖಂಡಿಸುವುದು ಅಷ್ಟು ಸುಲಭವಲ್ಲ. ತಮ್ಮ ಪ್ರತಿ ವಾದಿಯ ಹೇಳಿಕೆಗಳನ್ನು ಆಧಾರಪೂರ್ವಕವಾಗಿ ಖಂಡಿಸಿ, ಇಲ್ಲವೇ ನಿಮ್ಮ ಮಿಥ್ಯಾವಿಶ್ವಾಸವನ್ನು ಬಿಟ್ಟು ವೈಷ್ಣವ ಧರ್ಮದ ದೀಕ್ಷೆ ಪಡೆಯಿರಿ"".

ಜೈನಪಂಡಿತರಿಗೆ ವೈಷ್ಣವ ಸಿದ್ಧಾಂತವನ್ನು ಖಂಡಿಸಲು ನ್ಯಾಯಬದ್ಧವಾದ ವಿಚಾರಗಳು ದೊರೆಯಲಿಲ್ಲ. ನಾಚಿಕೆಯಿಂದ ತಲೆತಗ್ಗಿಸಿ ಕುಳಿತರು.

ಸಭೆಯಲ್ಲಿ ಹೀಗೆ ಮತ್ತೆ ಕೆಲವು ಪಂಡಿತರು ಪ್ರಯತ್ನಪಟ್ಟು ವಿಫಲರಾದರು.

ಆಗ ರಾಜ ವಿಟ್ಠಲದೇವನು ಸಭೆಯಲ್ಲಿ ಹೀಗೆಂದು ಘೋಷಿಸಿದನು – "ನೀವೆಲ್ಲಾ ನೋಡಿದ್ದೀರಿ, ವೈಷ್ಣವಾಚಾರ್ಯರು ಇಲ್ಲಿನ ಜೈನ ವಿದ್ವಾಂಸರನ್ನೆಲ್ಲಾ ವಾದದಲ್ಲಿ ಸೋಲಿಸಿದ್ದಾರೆ. ಇಂತಹ ಸಂದರ್ಭದಲ್ಲಿ ನಮ್ಮಗಳ ಕರ್ತವ್ಯವೇನು? ಮಿಥ್ಯಾ ಧರ್ಮವನ್ನನುಸರಿಸಿ, ಎಲ್ಲ ವಿಧದ ಕಷ್ಟಕಾರ್ಪಣ್ಯಗಳನ್ನನುಭವಿಸುತ್ತ ನರಕಕ್ಕೆ ಬೀಳುವುದು ಸರಿಯೆ? ಅಥವಾ ನಿಜವಾದ ಧರ್ಮದ ಆಶ್ರಯಪಡೆದು ದಿವ್ಯಜ್ಞಾನಾನಂದವನ್ನು ಪಡೆಯುವುದು ಸರಿಯೇ? ಬುದ್ಧಿವಂತರು ಯಾವಾಗಲೂ ದುಃಖಕ್ಕೆ ಬದಲಾಗಿ ಪರಮ ಸುಖವನ್ನೇ ಬಯಸುತ್ತಾರೆ. ಅಜ್ಞಾನಕ್ಕೆ ಬದಲಾಗಿ ಜ್ಞಾನವನ್ನು ಬಯಸುತ್ತಾರೆ. ಅಂದ ಮೇಲೆ ಎಲ್ಲರೂ ರಾಮಾನುಜರಿಂದ ವೈಷ್ಣವ ದೀಕ್ಷೆ ಪಡೆದು ಶ್ರೀ ವೈಷ್ಣವರಾಗಿ".

ಯತಿರಾಜರು ಬಹಳ ಜನ ಜೈನರಿಗೆ ವೈಷ್ಣವ ದೀಕ್ಷೆ ಕೊಟ್ಟರು. ಕಡೆಯಲ್ಲಿ ವಿಟ್ಠಲದೇವನಿಗೂ ದೀಕ್ಷೆಕೊಟ್ಟು **ವಿಷ್ಣುವರ್ಧನ**ನೆಂದು ಹೆಸರಿಟ್ಟರು.

ಎಲ್ಲರೂ ನಾರಾಯಣನನ್ನು ಕೊಂಡಾಡಿದರು.

**ರಾಗ-ಖಮಾಚ್** **ಆದಿತಾಳ**

ನಾರಾಯಣ ಎನ್ನಿರೋ । ಶ್ರೀ ನರಹರಿಪಾರಾಯಣ ಮಾಡಿರೋ ॥ಪ॥
ನಾರಾಯಣನೆಂದು ಅಜಮಿಳನು ಕೈವಲ್ಯ ।
ಸೇರಿದನೆಂಬೊಸುದ್ದಿಯ ಕೇಳಿ ಅರಿಯಿರೇ ॥ಅ॥
ಕಾಶಿಗೆ ಹೋಗಲೇಕೆ । ಕಾವಡಿಪೊತ್ತು । ಬೇಸತ್ತು ತಿರುಗಲೇಕೆ ॥
ವಾಸುದೇವನನಾಮ ಬಾಯ್ತುಂಬನೆನೆದರೆ । ಕ್ಲೇಶಗಳೆಂಬುದು
ಲೇಶಮಾತ್ರವಿಲ್ಲ ॥೧॥ ಚೋರರ ಭಯವಿಲ್ಲವೊ । ಹರಿನಾಮಕ್ಕೆ ।
ಯಾರ ಅಂಜಿಕೆಯಿಲ್ಲವೊ ॥ ಊರನಾಳುವದೊರೆ ನೀತಿಭೀತಿಗಳಿಲ್ಲ ।
ಘೋರಪಾತಕವೆಲ್ಲ ದೂರ ಮಾಡುವುದಕ್ಕೆ ॥೨॥ ಸ್ನಾನಮಾಡಲೇಕೆ ।
ಮಾನವರಿಗೆ । ಮೌನಮಂತ್ರಗಳೇಕೆ ॥ ದೀನಪಾಲಕನಮ್ಮ
ಬೆಟ್ಟದೊಡೆಯನ್ನ । ಧ್ಯಾನಕ್ಕೆ ಸರಿಯುಂಟೆ ಪುರಂದರವಿಠಲನ ॥೩॥

— ❋ —

# 27

# ಯಾದವಾದ್ರಿಪತಿ

ಈ ರೀತಿ ರಾಮಾನುಜರು ಸಾವಿರಾರು ಜೈನರನ್ನು ವೈಷ್ಣವ ಧರ್ಮಕ್ಕೆ ಪರಿವರ್ತಿಸಿದರು. ಅವರೊಂದಿಗೆ ಕೆಲಕಾಲವಿದ್ದು, ಯಾದವಾದ್ರಿ (ಮೇಲುಕೋಟೆ)ಗೆ ತೆರಳಿದರು. ಈ ಪವಿತ್ರ ಭೂಮಿಯಲ್ಲಿ ಶಕವರ್ಷ 1020ರಲ್ಲಿ ಪಾದಾರ್ಪಣ ಮಾಡಿದರು.

ಒಮ್ಮೆ ಇಲ್ಲಿಯ ತುಳಸೀವನದಲ್ಲಿ ಸುತ್ತಾಡುತ್ತಿರುವಾಗ ಹುತ್ತದ ಬುಡಲ್ಲಡಗಿದ್ದ ಒಂದು ವಿಗ್ರಹ ಕಣ್ಣಿಗೆ ಬಿದ್ದಿತು. ಹುತ್ತವನ್ನು ಅಗೆದು ವಿಗ್ರಹವನ್ನು ಹೊರತೆಗೆದು ಪೀಠದ ಮೇಲೆ ಪ್ರತಿಷ್ಠಾಪಿಸಿ, ಅದಕ್ಕೆ ಜೀವಕಳೆ ತುಂಬಿದರು. ನೆರೆದಿದ್ದ ಭಕ್ತರು ಆ ಸುಂದರ ಮೂರ್ತಿಯನ್ನು **ಚೆಲುವನಾರಾಯಣ**ನೆಂದು ಕರೆದರು.

ಅಲ್ಲಿಯ ಕೆಲವು ವೃದ್ಧರು ಹೇಳಿದರು – "ನಮ್ಮ ಬಾಲ್ಯದಲ್ಲಿ ನಮ್ಮ ಹಿರಿಯರು ಹೇಳುತ್ತಿದ್ದರು, ಮುಸ್ಲಿಮರ ಧಾಳಿಯ ಸಮಯದಲ್ಲಿ ಅರ್ಚಕರು ಈ ಮೂರ್ತಿಯನ್ನು ರಕ್ಷಿಸಲೋಸುಗ ಮಣ್ಣಿನಲ್ಲಿ ಹೂತಿಟ್ಟರೆಂದು". ಇದೇ ಆ ಯಾದವಾದ್ರಿಪತಿ ಚೆಲುವ ನಾರಾಯಣನಿರಬಹುದು. "ತಮ್ಮ ಆಗಮನದಿಂದ ಅವನು ಪುನಃ ಭಕ್ತರಿಂದ ಸೇವೆ ಪಡೆಯಲು ಉದ್ಭವಿಸಿದನು".

**ರಾಮಾನುಜರು:** ನಿಮ್ಮ ಮಾತು ಸತ್ಯ. ನನ್ನ ಸ್ವಪ್ನದಲ್ಲಿ ಈ ಯಾದವಾದ್ರಿಪತಿಯೇ ಬಂದು ನನಗೆ ಸೇವೆ ಸಲ್ಲಿಸೆಂದು ಅಜ್ಞಾಪಿಸಿದನು. ಈಗ ನೀವು ನಾವು ಎಲ್ಲರೂ ಸೇರಿ ಅವನಿಗೆ ಒಂದು ದೇವಸ್ಥಾನವನ್ನು ಕಟ್ಟೋಣ. ಇಂದಿನಿಂದಲೇ ಅವನ ಪೂಜಾಕೈಂಕರ್ಯಗಳು ನಡೆಯಲಿ.

ರಾಮಾನುಜರ ಆದೇಶದಂತೆ ಎಲ್ಲರೂ ಸೇರಿ ಒಂದು ಭವ್ಯವಾದ ದೇವಸ್ಥಾನವನ್ನು ನಿರ್ಮಿಸಿದರು. ಅದೇ ದೇವಸ್ಥಾನದ ಬಳಿಯೇ ಒಂದು ದೊಡ್ಡ ಪುಷ್ಕರಣಿಯಿತ್ತು. ಅದರ ಶುದ್ಧವಾದ ನೀರನ್ನು ಸ್ವಾಮಿಯ ಅರ್ಚನೆಗೆ ಉಪಯೋಗಿಸುತ್ತಿದ್ದರು.

ಒಮ್ಮೆ ರಾಮಾನುಜರು ಆ ಕಲ್ಯಾಣಿಯ ಉತ್ತರ ಭಾಗದಲ್ಲಿ ಸಂಚರಿಸುತ್ತಿರುವಾಗ ಬಿಳಿ ಮಣ್ಣನ್ನು ಪತ್ತೆ ಹಚ್ಚಿದರು. ಅದು ಊರ್ಧ್ವಪುಂಡ್ರಕ್ಕೆ ಉಪಯೋಗವಾಗುತ್ತಿತ್ತು. ಈಗಲೂ ಅದನ್ನು ಉಪಯೋಗಿಸುತ್ತಿದ್ದಾರೆ.

ಸಾಮಾನ್ಯವಾಗಿ ಎಲ್ಲ ದೇವಾಲಯಗಳಲ್ಲೂ ಎರಡೂ ಮೂರ್ತಿಗಳಿರುತ್ತವೆ. ಒಂದು ಅಚಲಮೂರ್ತಿ (ಮೂಲಮೂರ್ತಿ) ಮತ್ತೊಂದು ಸಚಲಮೂರ್ತಿ (ಉತ್ಸವ ಮೂರ್ತಿ) ಉತ್ಸವಮೂರ್ತಿಯನ್ನು ವಾಹನಗಳ ಮೇಲೆ ಇಲ್ಲವೇ ಜನರು ಹೆಗಲ ಮೇಲೆ ಹೊತ್ತು ಉತ್ಸವ ಮಾಡುತ್ತಾರೆ.

ಒಂದು ದಿನ ರಾತ್ರಿ ಚೆಲುವನಾರಾಯಣ ರಾಮಾನುಜರ ಸ್ವಪ್ನದಲ್ಲಿ ಕಾಣಿಸಿಕೊಂಡು ಆಜ್ಞೆ ಮಾಡಿದನು. "ಮಗು ರಾಮಾನುಜ, ನನ್ನ ಉತ್ಸವ ಮೂರ್ತಿ ಇಲ್ಲಿಲ್ಲ. ಆದ ಕಾರಣ ನಾನು ದೇವಸ್ಥಾನದಿಂದ ಹೊರಗೆ ಹೋಗಿ ಎಲ್ಲರಿಗೂ ದರ್ಶನಕೊಟ್ಟು, ಅವರನ್ನು ಆಶೀರ್ವದಿಸಿ, ಅವರ ಪಾಪ ಪರಿಹಾರ ಮಾಡಲಾರೆ. ನನ್ನ ಉತ್ಸವ ಮೂರ್ತಿಯನ್ನು **ಸಂಪತ್ಕುಮಾರ**ನೆಂದು ಕರೆಯುತ್ತಿದ್ದರು. ಈಗ ನನ್ನ ಉತ್ಸವಮೂರ್ತಿ ದೆಹಲಿಯ ಬಾದಶಾಹನ (ಚಕ್ರವರ್ತಿಯ) ಬಳಿ ಸೇರಿದೆ. ನೀನು ಕೂಡಲೇ ದೆಹಲಿಗೆ ಧಾವಿಸಿ ಆ ಉತ್ಸವ ಮೂರ್ತಿಯನ್ನು ತೆಗೆದುಕೊಂಡು ಬಾ".

ಯಾದವಾದ್ರಿಪತಿಯ ಅಣತಿಯಂತೆ ರಾಮಾನುಜರು ಕೆಲವು ಶಿಷ್ಯರೊಡಗೂಡಿ ದೆಹಲಿಗೆ ಪ್ರಯಾಣ ಮಾಡಿದರು. ಎರಡು ತಿಂಗಳ ನಂತರ ದೆಹಲಿಯನ್ನು ಸೇರಿದರು.

ಅಲ್ಲಿಯ ಚಕ್ರವರ್ತಿಯನ್ನು ಕಂಡರು. ಚಕ್ರವರ್ತಿ ಜ್ಞಾನಪ್ರತಿಭೆಯಿಂದ ಹೊಳೆಯುತ್ತಿದ್ದ ಯತಿರಾಜರ ಮುಖ ಸೌಂದರ್ಯವನ್ನು ನೋಡಿ ಬೆರಗಾದನು. ಅವರ ಸೌಜನ್ಯಶೀಲ ಸದ್ಗುಣಗಳಿಗೆ ಮಾರುಹೋದನು.

**ಬಾದಶಾಹ:** ತಾವು ಯಾರು? ಎಲ್ಲಿಂದ ಬಂದಿರಿ. ನನ್ನಲ್ಲಿಗೆ ಬರಲು ಕಾರಣವೇನು?

**ರಾಮಾನುಜರು:** ನಾನು ವೈಷ್ಣವಭಕ್ತ. ದಕ್ಷಿಣ ಭಾರತದಲ್ಲಿ ಮೈಸೂರು (ಕರ್ನಾಟಕ) ರಾಜ್ಯದಲ್ಲಿ ಮೇಲುಕೋಟೆಯೆಂಬ ಒಂದು ಪವಿತ್ರ ಸ್ಥಳವಿದೆ. ತಮ್ಮವರು ಧಾಳಿಯಿಟ್ಟಾಗ

ಅಲ್ಲಿಯ ಉತ್ಸವಮೂರ್ತಿಯನ್ನು ತಮ್ಮಲ್ಲಿಗೆ ತಂದಿದ್ದಾರೆ. ಸ್ವಾಮಿ ಶ್ರೀಮನ್ನಾರಾಯಣನಿಂದ ಈ ವಿಷಯ ನನಗೆ ತಿಳಿಯಿತು. ತಾವು ದಯಮಾಡಿ ಆ ಉತ್ಸವಮೂರ್ತಿಯನ್ನು ನನಗೆ ಒಪ್ಪಿಸಬೇಕೆಂದು ಪ್ರಾರ್ಥಿಸಿದರು.

ಚಕ್ರವರ್ತಿ ಅವರ ಕರೆಗೆ ಓಗೊಟ್ಟು ಅವರನ್ನು ಅನೇಕ ದೇವರ ಪ್ರತಿಮೆಗಳಿದ್ದ ಹಜಾರಕ್ಕೆ ಕರೆದೊಯ್ದನು.

ಯತಿರಾಜರು ಅಲ್ಲಿಯ ಮೂರ್ತಿಗಳನ್ನೆಲ್ಲಾ ಒಂದೊಂದಾಗಿ ನೋಡಿ, ನನಗೆ ಬೇಕಾದ ಮೂರ್ತಿ ಇಲ್ಲಿಲ್ಲವೆಂದರು.

ಆಗ ಚಕ್ರವರ್ತಿ ತನ್ನ ಮಗಳಿಗೆ ಪ್ರಿಯವಾಗಿದ್ದ ಒಂದು ಮೂರ್ತಿಯನ್ನು ಬೇರೆ ಕಡೆ ತೋರಿಸಿದನು.

ಯತಿರಾಜರು ಅದನ್ನು ನೋಡಿ, ಅದೇ ಸಂಪತ್ಕುಮಾರ ಮೂರ್ತಿಯೆಂದು ತೀರ್ಮಾನಿಸಿ, "ಈ ಮೂರ್ತಿಯನ್ನು ನಮಗೆ ದಯಪಾಲಿಸಬೇಕೆಂದು ಕೇಳಿಕೊಂಡರು".

ಚಕ್ರವರ್ತಿಯು ಆ ಮೂರ್ತಿಯನ್ನು ಅವರಿಗೆ ಒಪ್ಪಿಸಿದನು. ಯತಿರಾಜರು ಆ ಮೂರ್ತಿಯನ್ನು ತೆಗೆದುಕೊಂಡು ದಕ್ಷಿಣಕ್ಕೆ ಪ್ರಯಾಣ ಬೆಳಸಿದರು. ಯತಿರಾಜರು ಮನಸ್ಸಿನಲ್ಲೇ ಯೋಚಿಸಿದರು, "ರಾಜಕುಮಾರಿ ಏನಾದರೂ ತನಗೆ ಪ್ರಿಯವಾದ ವಿಗ್ರಹವನ್ನು ಕೊಟ್ಟ ಸುದ್ದಿ ಕೇಳಿದರೆ ಪುನಃ ಅದನ್ನು ಹಿಂದಕ್ಕೆ ತರಿಸಲು ತನ್ನ ತಂದೆಗೆ ಕರೆಕೊಡಬಹುದು." ಆದ್ದರಿಂದ ಬೇಗ ಬೇಗ ವಿಶ್ರಾಂತಿ ಪಡೆಯದೇ ಪ್ರಯಾಣ ಬೆಳಸಿದರು.

ಯತಿರಾಜರ ಊಹೆ ಸತ್ಯವಾಯಿತು. ರಾಜಕುಮಾರಿ ತನ್ನ ಪ್ರಿಯ ವಿಗ್ರಹವನ್ನು ತನ್ನ ತಂದೆ ಯಾರಿಗೋ ಕೊಟ್ಟನೆಂಬ ಸುದ್ದಿಯನ್ನು ಕೇಳಿ, ಬಹಳ ದುಃಖಿತಳಾಗಿ, ಖಿನ್ನಳಾಗಿ ತಂದೆಯ ಹತ್ತಿರ ಬಂದು ತನಗೆ ಆ ವಿಗ್ರಹ ಬೇಕೇ ಬೇಕೆಂದು ಹಠಹಿಡಿದಳು.

ಚಕ್ರವರ್ತಿ ಕೂಡಲೆ ತನ್ನ ಸೈನ್ಯದ ತುಕಡಿಗೆ ಆ ವಿಗ್ರಹವನ್ನು ತೆಗೆದುಕೊಂಡು ಹೋಗಿರುವ ಬ್ರಾಹ್ಮಣರನ್ನು ಹಿಂಬಾಲಿಸಿ ಆ ವಿಗ್ರಹವನ್ನು ಹಿಂದಕ್ಕೆ ತರಬೇಕಂದು ಆಜ್ಞಾಪಿಸಿದನು.

ರಾಜಕುಮಾರಿ ತಾನೂ ಸಹ ಆ ಬ್ರಾಹ್ಮಣರನ್ನು ನೋಡಲು ಹೋಗುತ್ತೇನೆಂದು ಅಪ್ಪಣೆ ಬೇಡಿದಳು.

ಚಕ್ರವರ್ತಿಯ ಅಪ್ಪಣೆ ಪಡೆದು ಕೆಲವು ದಾಸಿಯರೊಂದಿಗೆ ರಾಜಕುಮಾರಿಯೂ ಹೊರಟಳು.

**ಕುಬೇರ**ನೆಂಬ ರಾಜಕುಮಾರ ಈ ರಾಜುಕುಮಾರಿ **ಬೀಬಿಲಚಿಮಾರ್**ಳನ್ನು ಪ್ರೀತಿಸುತ್ತಿದ್ದನು. ಅವಳನ್ನು ವಿವಾಹ ಮಾಡಿಕೊಳ್ಳಬೇಕೆಂದಿದ್ದನು. ಲಚಿಮಾರಳು ವಿಗ್ರಹವನ್ನು ತರಲು ಹೋಗುತ್ತಿದ್ದಾಳೆಂಬ ವಿಚಾರವನ್ನು ಕೇಳಿ ತಾನೂ ಅವಳೊಂದಿಗೆ ಹೊರಟನು.

ರಾತ್ರಿಹಗಲೆನ್ನದೆ ರಾಮಾನುಜರು ತನ್ನ ಶಿಷ್ಯರೊಂದಿಗೆ ಪ್ರಯಾಣ ಬೆಳೆಸಿ ಚಕ್ರವರ್ತಿಯ ರಾಜ್ಯದ ಎಲ್ಲೆಯನ್ನು ದಾಟಿಬಿಟ್ಟರು. ಬರುವ ಮಾರ್ಗದಲ್ಲಿ**ಅಂತ್ಯಜರು** ರಾಮಾನುಜರಿಗೆ ಪೂರ್ಣ ಬೆಂಬಲ ಕೊಟ್ಟರು. ಅಂತೂ ಬಹಳ ಪ್ರಯಾಸದಿಂದ ವಿಗ್ರಹವನ್ನು ಮೇಲುಕೋಟೆಗೆ ಬಿಜಯಿಸಿ ದೇವಸ್ಥಾನದ ಒಳಗಡೆ ಗುಪ್ತಸ್ಥಳದಲ್ಲಿ ಸ್ಥಾಪಿಸಿದರು.

ಅಂತ್ಯಜರ ಸಹಾಯವಿಲ್ಲದೇ ಹೋಗಿದ್ದರೆ, ರಾಮಾನುಜರು ಸೈನಿಕ ಸಿಪಾಯಿಗಳ ಕೈಗೆ ಸಿಕ್ಕಿ ಬೀಳುತ್ತಿದ್ದರು. ಆದ್ದರಿಂದ ಅವರು ಮಾಡಿದ ಉಪಕಾರದ ಸ್ಮರಣೆಗಾಗಿ ಅವರು ವರ್ಷಕ್ಕೆ ಒಂದು ಬಾರಿ ದೇವಸ್ಥಾನವನ್ನು ಪ್ರವೇಶಿಸಿ ಮೂರು ದಿನಗಳ ಕಾಲ ಯಾದವಾದ್ರಿಪತಿಯ ದರ್ಶನ ಮಾಡಲು ರಾಮಾನುಜರು ಅವಕಾಶ ಮಾಡಿಕೊಟ್ಟರು.

ಪರಮಾತ್ಮ ನಿರಾಕಾರನೂ ಹೌದು, ಸಾಕಾರನೂ ಹೌದು. ಅನೇಕ ವೇಳೆ ಭಕ್ತರನ್ನುದ್ಧರಿಸಲು ಸಾಕಾರ ಮೂರ್ತಿಯಾಗಿ ಜಗತ್ತಿನಲ್ಲಿ ಕಾಣಿಸಿಕೊಳ್ಳುತ್ತಾನೆ. ಇಂತಹ ಪವಿತ್ರ ವಿಗ್ರಹಗಳು ಶ್ರೀಹರಿಯ ಅರ್ಚಾವತಾರಗಳು.

ಅಮರನಾಥ, ಕೇದಾರನಾಥ, ಬದರಿ ನಾರಾಯಣ, ಚಂದ್ರನಾಥ, ಜಗನ್ನಾಥ, ದ್ವಾರಕಾನಾಥ, ರಾಮನಾಥ, ಕಾಳಿಕಾಮಾತೆ, ಅಂತೆಯೇ ಈ ಯಾದವಾದ್ರಿನಾಥ ಇವರೆಲ್ಲರೂ ಅರ್ಚಾವತಾರಿಗಳೇ.

ಬೀಬಿಲಚಿಮಾರಳು ಅನೇಕ ಜನ್ಮಗಳಿಂದ ಶ್ರೀ ವಿಷ್ಣುವಿನ ಭಕ್ತಳಾಗಿದ್ದಳು. ಈ ಜನ್ಮದಲ್ಲಿ ಅವಳ ಭಕ್ತಿಗೆ ಮೆಚ್ಚಿ ಶ್ರೀ ವಿಷ್ಣುವು ಸಂಪತ್ಕುಮಾರನಾಗಿ, ಅರ್ಚಾವತಾರಿಯಾಗಿ, ಅವಳನ್ನು ಅನುಗ್ರಹಿಸಲು ಅಲ್ಲಿ ಸೇರಿದ್ದನು. ಬೀಬಿಲಚಿಮಾರಳೂ ಸಹ ಈ ವಿಗ್ರಹವನ್ನು ಪಡೆದು ಪರಮಾನಂದ ಭರಿತಳಾಗಿದ್ದಳು. ಅಂತಹ ಭಕ್ತೆ ಈ ಮೂರ್ತಿಯಿಂದ ದೂರವಿರಲು ಹೇಗೆ ಸಾಧ್ಯ?

ತನ್ನ ಇಷ್ಟದೇವರಿಗಾಗಿ ತನ್ನ ಪ್ರಾಣವನ್ನರ್ಪಿಸಲು ಸಿದ್ಧಳಿದ್ದಳು.

ರಾಜಕುಮಾರಿ ತನ್ನ ತಂದೆಯ ಗಡಿ ದಾಟಿದರೂ ತನ್ನ ಮೂರ್ತಿ ಲಭ್ಯವಾಗಲಿಲ್ಲ. ಅವಳ ದುಃಖ ನೂರ್ಮಡಿಯಾಯಿತು. ಕುಬೇರನು ಎಷ್ಟು ಸಂತೈಸಿದರೂ ಅವಳ ದುಃಖ ದೂರಾಗಲಿಲ್ಲ. "ನನ್ನ ಪ್ರಭುವೇ, ನನ್ನ ಸ್ವಾಮಿಯೇ" ಎಂದು ಪರಮಾತ್ಮನನ್ನೇ ಧ್ಯಾನಿಸುತ್ತಾ ಒಬ್ಬಳೇ ಎಲ್ಲರನ್ನು ಬಿಟ್ಟು ದಕ್ಷಿಣ ದಿಕ್ಕಿಗೆ ಹೊರಟಳು. ಕುಬೇರನೂ ಸಹ ಅವಳನ್ನು ಒಂಟಿಯಾಗಿ ಬಿಡದೆ ಹಿಂಬಾಲಿಸಿದನು. ಕಾಡುಗಳಲ್ಲಿ ದೊರೆಯುವ ಹಣ್ಣು ಹಂಪಲುಗಳನ್ನು ತಂದುಕೊಟ್ಟು ಅವಳನ್ನು ಉಪಚರಿಸಿದನು.

ಎಷ್ಟೋ ದಿನಗಳು ಹೀಗೆ ಪ್ರಯಾಣ ಮಾಡಿ ಮೇಲುಕೋಟೆ ತಲುಪಿದಳು. ಕಡೆಗೆ ಸಂಪತ್ಕುಮಾರನನ್ನು ಸಂಧಿಸಿಯೇ ಬಿಟ್ಟಳು.

ಯತಿರಾಜರೂ ಅವರ ಶಿಷ್ಯರೂ ಇವಳ ಪರಮಭಕ್ತಿಯನ್ನು ನೋಡಿ ಬೆರಗಾದರು. ಜಾತಿಯಲ್ಲಿ ಮುಸ್ಲಿಮಳಾದಾಗ್ಯೂ ಅವಳಿಗೆ ದೇವಸ್ಥಾನದೊಳಗೆ ಪ್ರವೇಶಿಸಲು ಯತಿರಾಜರು ಅನುಮತಿ ಕೊಟ್ಟರು. ನಿಜವಾದ ಭಕ್ತರಿಗೆ ಯಾವ ಜಾತಿಯ ಬಂಧನವೂ ಇರುವುದಿಲ್ಲ.

ತನ್ನ ಹೃದಯೇಶನ ದರ್ಶನದಿಂದ ಆನಂದಭರಿತಳಾಗಿ ಆಕೆಯು ಅವನ ಗುಣಗಾನ ಮಾಡಿದಳು.

**ರಾಗ-ಶಹನ** **ಆದಿತಾಳ**

,ಪರಮವಿಷ್ಣುವೇನೀನು । ಎನ್ನನಗಲಿ ಬಂದ ।
,ಕಾರಣವೇನೆಂದು । ಪೇಳೆಲೊ ಪ್ರಭುವೆ ॥ಪ॥
,ವಿರಹದಿ ನಿನ್ನಯ ಈ । ಬೀಬಿಲಚಿಮಾರಳು ।
,ಪರಿಪರಿಕಷ್ಟವ । ಸಹಿಸುತೆ ಬಂದೆ ನಿಲ್ಲಿ ॥೧॥

,ಇನ್ನು ಈ ಭವದ । ಬಂಧನ ಬೇಡವೊ ।
,ಎನ್ನ ಮೊರೆಯ ಕೇಳೋ । ಆಪದ್ಬಾಂಧವನೆ ॥
,ನಿನ್ನ ಪಾದಂಗಳಲಿ । ಎನಗಾಶ್ರಯವನಿತ್ತು ।
,ದೀನಳಾದ ಈ ನಿನ್ನ । ಭಕ್ತಳ ಸಲಹೋ ॥೨॥

ಹೀಗೆ ಗುಣಗಾನ ಮಾಡುತ್ತಾ ತಾನು ಶ್ರೀ ಸಂಪತ್ಕುಮಾರನ ಪಾದಾರವಿಂದಗಳಲ್ಲಿ ಐಕ್ಯಹೊಂದಿದಳು.

ಲಚಿಮಾರಳು, ತನ್ನ ಹೃದಯದೇವತೆ ಸ್ವಾಮಿಯಲ್ಲಿ ಒಂದಾದ ಮೇಲೆ ಕುಬೇರನೂ ಸಹ ತನ್ನ ಇಸ್ಲಾಂ ಧರ್ಮವನ್ನು ಬಿಟ್ಟು ಶ್ರೀರಂಗಕ್ಕೆ ಶ್ರೀ ರಂಗನಾಥನ ಆಶ್ರಯ ಪಡೆಯಲು ಹೊರಟ.

ಅಲ್ಲಿ ಈತನು ಮುಸ್ಲಿಮನಾದ ಕಾರಣ ದೇವಾಲಯದ ಒಳಗೆ ಹೋಗಲು ಅಡ್ಡಿಪಡಿಸಿದರು.

ಆತನು ದೇವಸ್ಥಾನದ ಹೊರಾಂಗಣದಲ್ಲೇ ಉಳಿದುಕೊಂಡು ಶೇಷಶಾಯಿ ನಾರಾಯಣನ ಧ್ಯಾನದಲ್ಲೇ ತಲ್ಲೀನನಾಗಿದ್ದನು. ಹೀಗೆ ಪೂರ್ಣಧ್ಯಾನದಲ್ಲಿದ್ದಾಗ ಒಂದು ಧ್ವನಿ ಕೇಳಿಬಂತು.

**ಪ್ರಪನ್ನ ಮೋಕ್ಷದಾನೇಽಹಂ ದೀಕ್ಷಿತೋ ಯವನೇಶ್ವರ ।**
**ಪತಿತಾನಾಂ ಮೋಕ್ಷದಾನೇ ಜಗನ್ನಾಥಃ ಪ್ರದೀಕ್ಷಿತಃ ॥**
**(ಪ್ರಪನ್ನಾಮೃತ)**

'ಎಲೈ ಯವನ ಶ್ರೇಷ್ಠನೆ, ನಾನು ಇಲ್ಲಿ ನನ್ನಾಶ್ರಯ ಪಡೆಯುವ ವೈಷ್ಣವರಿಗೆ ಸಾಯುಜ್ಯವನ್ನು ಕೊಡುತ್ತೇನೆ. ಅಲ್ಲಿ ಸ್ವಾಮಿ ಜಗನ್ನಾಥನಿದ್ದಾನೆ. ಅವನು ಎಲ್ಲಾ ದೀನದಲಿತರಿಗೂ ಮುಕ್ತಿ ಕೊಡುತ್ತಾನೆ.

ಸ್ವಾಮಿಯ ಈ ಆಜ್ಞೆಯನ್ನು ಶಿರಸಾವಹಿಸಿ, ಕುಬೇರನು ಮರು ದಿನ ಶ್ರೀ ಜಗನ್ನಾಥನ ಬಳಿಗೆ ಪ್ರಯಾಣ ಮಾಡಿದನು.

ಕೆಲವು ತಿಂಗಳ ನಂತರ ಈ ಮುಸಲ್ಮಾನ ಭಕ್ತ ಶ್ರೀಪುರಿ ಧಾಮವನ್ನು ಸೇರಿದನು. ಅಲ್ಲಿ ಶ್ರೀ ಪುರುಷೋತ್ತಮನ ದಿವ್ಯ ಸ್ವರೂಪವನ್ನು ಪಡೆದು ಧನ್ಯನಾದನು.

ಅಂದಿನಿಂದ ಜ್ಞಾನಿಯಾದ ಕುಬೇರನು ಪರಮಾತ್ಮನ ಸ್ವರೂಪವನ್ನು ವಿದ್ಯಾವಂತ ಬ್ರಾಹ್ಮಣನಲ್ಲಿ, ಮೂಕಪ್ರಾಣಿಗಳಾದ ಹಸು, ಆನೆ, ನಾಯಿಗಳಲ್ಲಿ, ಚಂಡಾಲನಲ್ಲಿ ಎಲ್ಲರಲ್ಲೂ, ಎಲ್ಲದರಲ್ಲೂ ಕಂಡನು. ತತ್‌ಸತ್ ಆ ಸತ್ಯವೇ ಎಲ್ಲೆಲ್ಲೂ ವ್ಯಾಪ್ತವಾಗಿದೆ ಎಂದು ಅರಿತನು.

ಒಮ್ಮೆ ಕುಬೇರನು, ಕನಕ ದಾಸರಂತೆ, ರೊಟ್ಟಿಯನ್ನು ಬೇಯಿಸುತ್ತಿದ್ದಾಗ, ಒಂದು ನಾಯಿ ರೊಟ್ಟಿಯನ್ನು ಕಚ್ಚಿಕೊಂಡು ಓಡಿ ಹೋಯಿತು. ಅದನ್ನು ಕಂಡ ಕುಬೇರನು ತುಪ್ಪದ ಬಟ್ಟಲನ್ನು ಹಿಡಿದು "ನಾರಾಯಣ ರೊಟ್ಟಿಯೊಂದಿಗೆ ಈ ತುಪ್ಪವನ್ನು ಬೆರಸಿಕೊ ರುಚಿಯಾಗಿರುತ್ತೆ" ಎಂದು ಕೂಗುತ್ತಾ ಅದರ ಹಿಂದೆ ಓಡಿದನು.

,ಕೊಳ್ಳೊನಾರಾಯಣ । ಕೊಳ್ಳೊನಾರಾಯಣ ।
,ಕೊಳ್ಳೊ ಈ ತುಪ್ಪವ । ಬೇಡಿಕೊಂಬೆನು ನಾನು ।।ಪ।।
,ಕಳ್ಳತನದಿ ನೀನು । ಕೊಂಡೊಯ್ದೆರೊಟ್ಟಿಯ ।
,ಕುಳ್ಳವಾಮನನಾಗಿ । ಬಲಿಗೆ ಮುಕ್ತಿಯ ಕೊಟ್ಟೆ ।।೧।।

,ನಿನ್ನ ಮಹಿಮೆಯ । ಏನೆಂದು ಪೊಗಳಲೋ ।
,ಎನ್ನಕೈ ಬಿಟ್ಟು ನೀ । ಪೋಗದಿರೆಲೋ ಜಗನ್ನಾಥ ।।
,ನಿನ್ನ ಈ ಭಕ್ತನ । ಮೊರೆಯಲಾಲಿಸಿ ಪ್ರಭುವೆ ।
,ಶುನಕನಾಗಿ ಬಂದೆಯಾ । ವೈಕುಂಠಕೆ ಕರೆದೊಯ್ಯಲು ।।೨।।

ಹೀಗೆ ನಾಯಿಯು ಆ ಭಕ್ತನನ್ನು ವೈಕುಂಠಕ್ಕೆ ಕರೆದುಕೊಂಡು ಹೋಯಿತೆಂಬ ವದಂತಿಯಿದೆ.

ದೇಹಾಭಿಮಾನವನ್ನು ತೊಡೆದು ಹಾಕಿದವನಿಗೆ ಜಾತಿಯ ಗರ್ವವಿರುವುದಿಲ್ಲ, ಈ ದೇಹದಲ್ಲಿ ಮಾತ್ರ ನಾವು ಹೆಸರು ಜಾತಿ, ಆಶ್ರಮ ಮೊದಲಾದವುಗಳನ್ನು ಕಾಣುತ್ತೇವೆ. ಈ ದೇಹದಿಂದಲೇ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಮುಸಲ್ಮಾನ, ಕ್ರೈಸ್ತ, ಆಂಗ್ಲ, ಹಿಂದು ಎಂಬ ಭೇದ–ಭಾವಗಳು ತಲೆದೋರುತ್ತವೆ.

ಪರಮಾತ್ಮನ ಪರಮ ಕರುಣೆಯಿಂದಾಗಿ ಬೀಬಿಲಚಿಮಾರ್, ಕುಬೇರ ಇವರುಗಳು ಆತ್ಮವು ದೇಹದಿಂದ ಬೇರೆ ಎಂಬುದನ್ನು ಅರಿತರು. ತತ್ಫಲವಾಗಿ ಅವರು ಜಾತಿಯ ವ್ಯಾಮೋಹದಿಂದ ದೂರವಾದರು. ರಾಮಾನುಜರು ಅವರನ್ನು ಶ್ರೇಷ್ಠ ಭಕ್ತರೆಂದು ಪರಿಗಣಿಸಿದರು. ಇಂದಿಗೂ ಆ ಚಕ್ರವರ್ತಿಯ ಮಗಳ ಪವಿತ್ರ ವಿಗ್ರಹವನ್ನು ಕೆಲವು ವೈಷ್ಣವ ದೇವಾಲಯಗಳಲ್ಲಿ ಸ್ಥಾಪಿಸಿ ಪೂಜಿಸುತ್ತಾರೆ.

**ಇದೇ ಹಿಂದೂ ಧರ್ಮದಲ್ಲಿ ಕಾಣುವ ಸಮಾನತೆ.** ರಾಮಾನುಜರು ಇದೇ ತತ್ವವನ್ನು ಎಲ್ಲರಿಗೂ ಬೋಧಿಸಿದರು.

# 28

# ಮತ್ತೆ ಕೂರೇಶರ ಬಗ್ಗೆ

ಪ್ರಸಿದ್ಧ ಭಕ್ತ ಕುಬೇರ ಶ್ರೀ ರಂಗವನ್ನು ಬಿಟ್ಟು ಶ್ರೀ ಕ್ಷೇತ್ರಕ್ಕೆ ಹೋದ ಮೇಲೆ ಕೂರೇಶರೂ ಸಹ ತಮ್ಮ ಹೆಂಡತಿ, ಮಗನೊಂದಿಗೆ ಗುರುವಿನ ಸನ್ನಿಧಿ ಸೇರಲು ಹೊರಟರು. ಅವರಿಗೆ ಹೊರ ಕಣ್ಣುಗಳಿಲ್ಲದಿದ್ದರೂ, ಒಳ ಕಣ್ಣುಗಳಲ್ಲಿ ಗುರುವಿನ ರೂಪವನ್ನು ಕಾಣುತ್ತಿದ್ದು, ಭಕ್ತಿಯನ್ನು ಅರ್ಪಿಸುತ್ತಿದ್ದರು.

ಕೃಷ್ಣಾಚಲಕ್ಕೆ ಹೋಗಿ ಭಗವಾನ್ ಸುಂದರಭುಜನನ್ನು ಆರಾಧಿಸಿದರು. ಅಲ್ಲಿ ಕೆಲಕಾಲ ತಂಗಿದರು.

ಅಲ್ಲಿಂದ ಪತ್ನೀಸುತರೊಡಗೂಡಿ ಸದ್ಗುರುವಿನ ಪಾದಪದ್ಮಗಳ ಸ್ಪರ್ಶಮಾಡುವ ಹಂಬಲದಿಂದ ಯಾದವಾದ್ರಿಯನ್ನು ಸೇರಿದರು.

ಅಲ್ಲಿ ಗುರುಗಳ ಪಾದಗಳ ಮೇಲೆ ಬಿದ್ದರು. ರಾಮಾನುಜರು ಅವರನ್ನು ಪ್ರೀತಿಯಿಂದ ಮೇಲೆತ್ತಿ ಅಪ್ಪಿಕೊಂಡು ಹೇಳಿದರು "ಇದು ಎಂತಹ ಸುದಿನ. ಈ ದಿನ ನಾನು ಒಬ್ಬ ಪ್ರಸಿದ್ಧ ಭಕ್ತನನ್ನು ಸ್ಪರ್ಶಿಸಿ ಶುದ್ಧನೂ ಧನ್ಯನೂ ಆದೆನು".

ಕೂರೇಶರು ಸ್ತಬ್ಧರಾಗಿ ಆನಂದ ಬಾಷ್ಪಸುರಿಸುತ್ತ ನಿಂತು ಬಿಟ್ಟರು. ಪತ್ನಿ ಹಾಗೂ ಮಗ ಪರಾಶರ ಇಬ್ಬರೂ ರಾಮಾನುಜರ ದಿವ್ಯ ಸನ್ನಿಧಿಯಲ್ಲಿ ಮಹದಾನಂದವನ್ನು ಪಡೆದರು.

ಗುರುಗಳ ಆಶ್ರಯ ಪಡೆದು ಕೆಲಕಾಲ ಅಲ್ಲೇ ತಂಗಿದರು. ಒಂದು ದಿನ ರಾಮಾನುಜರು ಕೂರೇಶರನ್ನು ಕುರಿತು ಹೀಗೆಂದರು – "ಮಗು, ಕಾಂಚೀಪುರಕ್ಕೆ ಹೋಗು.

ಸ್ವಾಮಿ ವರದರಾಜನಲ್ಲಿ ಕಣ್ಣುಗಳು ಬರಲೆಂದು ಪ್ರಾರ್ಥಿಸಿಕೋ. ನಿನ್ನ ಕುರುಡತನವನ್ನು ಖಂಡಿತ ದೂರಮಾಡುತ್ತಾನೆ. ತಡಮಾಡಬೇಡ". ಕೂರೇಶರು ಹಾಗೇ ಆಗಲಿ - ಎಂದು ಹೇಳಿ ಗುರುಗಳ ಪಾದಕ್ಕೆರಗಿ, ಅವರ ಅಜ್ಞೆಯಂತೆ ಕಾಂಚೀಪುರಕ್ಕೆ ಹೊರಟರು.

ಕಾಂಚೀಪುರಕ್ಕೆ ಬಂದು ಶ್ರೀ ವರದರಾಜನ ದರ್ಶನ ಮಾಡಿ ತನ್ನ ತನು ಮನಗಳನ್ನು ಅರ್ಪಿಸಿ ಹಾಡಿಕೊಂಡಾಡಿದರು.

**ರಾಗ-ಸುರಟಿ** **ಆದಿತಾಳ**

,ವರದರಾಜ ನಿನ್ನ । ಸೇವೆಯ ಮಾಡಲು ।
,ಗುರುವಿನಾಣತಿಯಂತೆ । ಬಂದಿಹೆನಿಲ್ಲಿಗೆ ॥ಪ॥
,ಹರಿಭಕ್ತರೆಲ್ಲರನು । ಪೊರೆವ ದೇವನು ನೀನು ।
,ಕರುಣೆಯ ತೋರಿ ಈ । ಕುರುಡನ ಸಲಹೋ ॥೧॥

,ಅನವರತ ಚಾಮರ, ಸೇವೆಯಕೈಗೊಂಡ ।
,ಘನಕಾಂಚೀಪೂರ್ಣರ । ಉದ್ಧರಿಸಲಿಲ್ಲವೇ ॥
,ಎನ್ನಯಗುರು ರಾಮಾ । ನುಜರ, ಅಭೀಷ್ಟವ ।
,ಘನಮಹಿಮನೆ ನೀ । ಪೂರೈಸಿಂದು ॥೨॥

ಅವರ ಭಕ್ತಿಗೆ ಮೆಚ್ಚಿದ ಸ್ವಾಮಿ ವರದರಾಜನು ಕೂರೇಶರಿಗೆ ಹೇಳಿದನು.

**ವರದರಾಜ:** ಮಗು ಕೂರೇಶ, ನಿನಗೆ ಬೇಕಾದ ವರವನ್ನು ಕೇಳು ಕೊಡುತ್ತೇನೆ.

**ಕೂರೇಶರು:** ಚತುರ್ಗ್ರಾಮದೊಡೆಯನ ಪರಮ ಉದ್ದೇಶ್ಯ ಈಡೇರಲಿ.

**ವರದರಾಜ:** ತಥಾಸ್ತು

ಚತುರ್ಗ್ರಾಮದ ಒಡೆಯ ಕ್ರಿಮಿಕಂಠನ ಬಳಿ ಮಂತ್ರಿಯಾಗಿದ್ದನು. ಅವನು ಕೂರೇಶರಿಗೆ ಶಿಷ್ಯನೂ ಆಗಿದ್ದನು. ಕೂರೇಶರ ಕಣ್ಣುಗಳನ್ನು ಕೀಳಿಸಲು ಅವನೇ ಕಾರಣಕರ್ತನಾಗಿದ್ದನು.

ಕೂರೇಶರು ತಮ್ಮ ಕಣ್ಣುಗಳಿಗೆ ದೃಷ್ಟಿ ಕೊಡೆಂದು ಕೇಳಿಕೊಳ್ಳದೆ ತಮ್ಮ ಶತ್ರುವಿಗೆ ಒಳ್ಳೆಯದನ್ನು ಮಾಡೆಂದು ಸ್ವಾಮಿಯನ್ನು ಕೇಳಿಕೊಂಡ ವಿಷಯ ರಾಮಾನುಜರ ಕಿವಿಗೂ ಬಿದ್ದಿತು.

ಆಗ ರಾಮಾನುಜರು ತಮ್ಮ ಶಿಷ್ಯನೊಂದಿಗೆ ಈ ಸಂದೇಶವನ್ನು ಕೊಟ್ಟು ಕಳುಹಿಸಿದರು "ಮಗು ಕೂರೇಶ, ನೀನು ಪರಮಾನಂದವನ್ನು ಅನುಭವಿಸುತ್ತಿರುವೆ ಎಂಬುದು ತಿಳಿದು ಬಂದಿತು. ಆದರೆ ಈ ವಿಷಯದಲ್ಲಿ ಮಾತ್ರ ನೀನು ಆ ಆನಂದವನ್ನು ನೀನೇ ಇಟ್ಟುಕೊಂಡು ನಿನ್ನ ಸ್ವಾರ್ಥತೆಯನ್ನು ತೋರಿಸಿದೆ. ನಾನು ಸಂತೋಷಪಡಬೇಕಾದರೆ ನೀನು ಶ್ರೀ ವರದರಾಜನಲ್ಲಿ ನಿನ್ನ ಕಣ್ಣುಗಳ ದೃಷ್ಟಿ ಬರುವಂತೆ ಪ್ರಾರ್ಥಿಸಲೇಬೇಕು. ನೀನು, ನಿನ್ನ ದೇಹ, ಮನಸ್ಸು ಎಲ್ಲ ನನ್ನ ವಸ್ತುಗಳೆಂಬುದು ನಿನಗೆ ತಿಳಿಯದೆ? ನಿನ್ನದು ಅನ್ನುವುದು ಏನೂ ಇಲ್ಲ".

ಗುರುವಿನ ಈ ಸಂದೇಶವನ್ನು ತಮ್ಮ ಸಹೋದರ ಶಿಷ್ಯನಿಂದ ಕೇಳಿ ಆನಂದ ಭರಿತರಾಗಿ ಕುಣಾದಾಡಿದರು.

**ಕೂರೇಶರು:** "ನಾನು ಈ ದಿನ ಧನ್ಯನಾದೆ. ಸದ್ಗುರು ಯತಿರಾಜರು ಪ್ರಾಪಂಚಿಕ ವಿಷಯಾಸಕ್ತನಾದ ನನ್ನನ್ನು ಅಪರವನಾಗಿ ಸ್ವೀಕರಿಸಿರುವುದು ಅವರ ವಿಶಾಲ ಹೃದಯದ ಸಂಕೇತವಾಗಿದೆ". ಈ ಕೂಡಲೇ ಹೋಗಿ ಸ್ವಾಮಿ ವರದರಾಜನಿಗೆ ಗುರುಗಳ ಆದೇಶವನ್ನು ಅರಿಕೆ ಮಾಡಿಕೊಳ್ಳುತ್ತೇನೆ.

### ಹಿಂದೋಳ

ಕಂದ॥ ನನ್ನಂತ ಧನ್ಯನಿಲ್ಲವೊ
೭ ನಿನ್ನಕೃಪೆಯಿಂ ಪಡೆದೆ ಗುರುವಿನನುಗ್ರಹವಂ
ನಾನವರಧೀನನು ದೇವ
ಅನುಮತಿಯಂತವರ ಕರುಣಿಸೆನಗೆ ದೃಷ್ಟಿಯಂ ॥

"ಸ್ವಾಮಿಯೇ, ನನ್ನ ದುರದೃಷ್ಟದಿಂದ ನಮ್ಮ ಗುರುಗಳಿಗೆ ಪ್ರಿಯವಾಗಿದ್ದ ಎರಡು ವಸ್ತುಗಳನ್ನು ಕಳೆದುಕೊಂಡೆ. ನಿನ್ನ ಕೃಪೆಯಿಂದ ಇಂದು ನಾನು ಅವುಗಳನ್ನು ಪಡೆಯಲು ಸಾಧ್ಯವೇ?".

**ಶ್ರೀ ವರದರಾಜ:** ಮಗು, ನಿನ್ನ ಪವಿತ್ರವಾದ ದೇಹವನ್ನು ಎರಡು ದಿವ್ಯವಾದ ಕಣ್ಣುಗಳು ಅಲಂಕರಿಸಲಿ. ಇದರಿಂದ ನಿನ್ನ ಗುರುಗಳಿಗೆ ಅಮಿತ ಆನಂದ ದೊರೆಯಲಿ. ನಿಮ್ಮಂತಹ ಭಕ್ತರ ಅಭೀಷ್ಟವನ್ನು ಈಡೇರಿಸುವ ದೃಷ್ಟಿಯಿಂದಲೇ ನಾನು ಇಲ್ಲಿ ನೆಲೆಸಿದ್ದೇನೆ.

ಸ್ವಾಮಿಯ ವಾತ್ಸಲ್ಯ ಭರಿತ ಮಾತುಗಳನ್ನು ಕೇಳಿ ಕೂರೇಶರಿಗೆ ವರ್ಣಿಸಲಾಗದಷ್ಟು ಆನಂದವಾಯಿತು. ಹೊರ ಪ್ರಪಂಚದ ಅರಿವೇ ಅವರಿಗಿಲ್ಲವಾಯ್ತು. ಸ್ವಲ್ಪ ಸಮಯದ ಮೇಲೆ ಯಥಾಪ್ರಕಾರ ಕಣ್ಣುಗಳ ದೃಷ್ಟಿ ಬಂದಿತು. ಅವರ ಆನಂದಕ್ಕೆ ಪಾರವೇ ಇಲ್ಲವಾಯ್ತು. ಕಣ್ಣೀರಿಡುತ್ತ, ಕೈಜೋಡಿಸಿ, ವಿಗ್ರಹವನ್ನು ನೋಡಿ ಹೇಳಿದರು. "ಎಲೈ ಸ್ವಾಮಿಯೆ, ಕಣ್ಣುಗಳನ್ನು ಕೊಟ್ಟವನು ನೀನೆ, ಅವುಗಳನ್ನು ತೆಗೆದುಕೊಂಡವನು ನೀನೆ, ಪುನಃ ಈಗ ನೀನೇ ಹಿಂದಿರುಗಿಸಿದೆ. ನಿನ್ನ ಲೀಲೆ ಅದ್ಭುತ. ಕ್ಷುದ್ರಜೀವಿಯಾದ ನಾನು ನಿನ್ನ ಲೀಲೆಯನ್ನು ತಿಳಿಯಲು ಸಾಧ್ಯವೇ? ಆದಿ, ಮಧ್ಯ, ಅಂತ್ಯವಿಲ್ಲದ ಪರಮಾನಂದ ಮೂರ್ತಿ ನೀನು. ನಿನ್ನ ಕೃಪೆಯಿಂದ ನನ್ನ ಅಜ್ಞಾನ ದೂರ ಸರಿಯಿತು. ನಾನೇ ಧನ್ಯ". ಹೀಗೆ ಆನಂದೋನ್ಮತ್ತರಾಗಿ ಕೂರೇಶರು ಕುಣಿದಾಡುತ್ತಿದ್ದರು. ಇತರೇ ಜನರು, ಭಕ್ತರು ಎಲ್ಲರೂ ಅವರಿಗೆ ಕಣ್ಣು ಬಂದದ್ದನ್ನು ನೋಡಿ ಸಂತೋಷ ಭರಿತರಾದರು.

ಎಲ್ಲರ ಹೃದಯದಲ್ಲೂ ಆಳವಾದ ಭಕ್ತಿ ಉಕ್ಕಿ ಹರಿಯಿತು. ಭಕ್ತರ, ಸ್ವಾಮಿಯ ಮಧ್ಯದ ಬಾಂಧವ್ಯ ಎಂತಹದೆಂಬುದು ತಿಳಿಯಿತು. ಸುದ್ದಿ ಎಲ್ಲೆಲ್ಲೂ ಹರಡಿತು. ಇದರಿಂದಾಗಿ ಜನರು ರಾಮಾನುಜರಲ್ಲಿ ಹಾಗೂ ಅವರ ಶಿಷ್ಯರಲ್ಲಿ ಹುದುಗಿರುವ ದೈವಿಕ ಶಕ್ತಿಯನ್ನು ಪ್ರತ್ಯಕ್ಷ ಕಂಡರು.

ರಾಮಾನುಜರು ಕೂರೇಶರಿಗೆ ಕಣ್ಣು ಬಂದ ಸಂಗತಿಯನ್ನು ಕೇಳಿ ಆನಂದದಿಂದ ಮೈಮರೆತು ಎಲ್ಲರ ಮುಂದೆ ಕುಣಿಯಲಾರಂಭಿಸಿದರು. ಎಲ್ಲರಿಗೂ ತಿಳಿಯ ಹೇಳಿದರು. "ನನ್ನ ಅಂತಿಮಗುರಿ ಸಾಧಿಸಿದಂತಾಯಿತು. ಕೂರೇಶರು ತನ್ನ ಶತ್ರುಗಳಿಗೂ ಸಹ ಮೋಕ್ಷ ದೊರಕಿಸುವಲ್ಲಿ ಸಮರ್ಥರಾದ ಮೇಲೆ, ಅವರ ಒಳ್ಳೆಯ ತನದಿಂದ ನಾವೂ ಸಹ ಮೋಕ್ಷವನ್ನು ಪಡೆಯುತ್ತೇವೆ.

**ಭಕ್ತರ ವೈಭವವನ್ನು ಕೊಂಡಾಡುವುದು ದೈವೀಪುರುಷರಿಗೆ ಸಹಜವಾದದ್ದೇ.**



# 29

# ಶ್ರೀ ರಾಮಾನುಜರ ಶಿಷ್ಯರ ದೈವೀಗುಣಗಳು

ಯತಿರಾಜರು ತಮ್ಮ ಶಿಷ್ಯರೊಡಗೂಡಿ ಯಾದವಾದ್ರಿಯನ್ನು ಬಿಟ್ಟು ಶ್ರೀ ರಂಗದ ಕಡೆ ಪ್ರಯಾಣ ಬೆಳಸಿದರು. ·

ಮಾರ್ಗದಲ್ಲಿ ವೃಷಭಾಚಲದಲ್ಲಿ ಸ್ವಾಮಿ ಸುಂದರಬಾಹುವನ್ನು ಆರಾಧಿಸಲು ತಂಗಿದರು. ಈ ಸ್ಥಳ ಮಧುರೆಯ ಸಮೀಪದಲ್ಲಿದೆ. ಹಿಂದೆ **ಆಂಡಾಳ್**ಳು ಸ್ವಯಂ ರಚಿತ ಸ್ತೋತ್ರಗಳಿಂದ ಸ್ವಾಮಿಯನ್ನು ಸ್ತುತಿಸುತ್ತಿದ್ದಳು. ಆಂಡಾಳಳು ಸ್ವಾಮಿಗೆ ಹರಕೆ ಹೊತ್ತಳು. ಸ್ವಾಮಿ ಅವಳ ಕೈ ಹಿಡಿದರೆ –

**ಕುರುಷೇಯದಿ ಮೇದೇವ ಪಾಣಿಗ್ರಹಣಮಂಗಲಂ ।**
**ಕ್ಷೀರಾದ್ಯನೇಕಸಂಯುಕ್ತ ಗುಡಾನ್ನಸ್ಯ ಘಟೀಶತಂ ॥**
**ಸಮರ್ಪಯೇ ಹರೇ ತುಭ್ಯಂ ನವನೀತ ಘಟೀಶತಂ ।**

**ರಾಗ-ಕುಂತಲವರಾಳಿ** **ಆದಿತಾಳ**

,ಸ್ವಾಮಿಯೆ, ಎನ್ನಕೈ । ಹಿಡಿಯುವುದಾದರೆ ।
,ಸಮರ್ಪಿಪೆ ನಿನಗೆ ಕ್ಷೀ । ರಾನ್ನದ ಶತಕೊಡವ ॥ಪ॥
,ಮಮತೆಯಿಂದಲಿ ಎನ್ನ । ಪರಿಗ್ರಹಿಸೋ ಪ್ರಭುವೆ ।
,ಸಮರ್ಪಿಪೆ ನಿನಗೆ । ಬೆಣ್ಣೆಯ ಶತಕೊಡವ ॥೧॥

ಸ್ವಾಮಿ ಪವಿತ್ರಾತ್ಮಳ ಇಷ್ಟಾರ್ಥವನ್ನು ಈಡೇರಿಸಿದನು. ಅವಳನ್ನು ತನ್ನಲ್ಲಿ ಐಕ್ಯ ಮಾಡಿಕೊಂಡನು. ಇದರಿಂದಾಗಿ ಆಂಡಾಳಳು ತನ್ನ ಹರಕೆಯನ್ನು ತೀರಿಸಲಾಗಲಿಲ್ಲ.

ರಾಮಾನುಜರು ಶ್ರೀ ಸುಂದರಬಾಹುವಿಗೆ ನೂರು ಮಡಕೆ ಕ್ಷೀರಾನ್ನವನ್ನೂ, ನೂರು ಕೊಡ ಬೆಣ್ಣೆಯನ್ನೂ ಅರ್ಪಿಸಿ ಪರಮಭಕ್ತೆ ಆಂಡಾಳಳ ಹರಕೆ ತೀರಿಸಿದರು. ಆದ್ದರಿಂದ ಅವರನ್ನು **ಗೋದಾಗ್ರಜ**ರೆಂದು ಕರೆದರು,

ಅಲ್ಲಿಂದ ರಾಮಾನುಜರು ಆಂಡಾಳಳ ಹುಟ್ಟು ಸ್ಥಳವಾದ ಶ್ರೀ ವಿಲ್ಲಿಪುತ್ತೂರಿಗೆ ಹೋದರು. ಅಲ್ಲಿ ಶೇಷಶಾಯಿ ನಾರಾಯಣನ ದರ್ಶನ ಪಡೆದು ಆಂಡಾಳಳ ದೇವಾಲಯಕ್ಕೆ ಹೋದರು. ಅಲ್ಲಿ ಅವಳನ್ನು ಸ್ತುತಿಸಿ ತಾನು ಧನ್ಯರೆಂದು ಭಾವಿಸಿದರು.

## ಭೈರವಿ

ಕಂದ|| ಪರಮ ಭಕ್ತೆ ಆಂಡಾಳಳೆ
ಕರವಪಿಡಿದ ನಿನ್ನಯ ಸುಂದರ ಬಾಹುವಿಗಂ
ಹರಕೆಯಂ ನಿನ್ನಯ ಸಲಿಸಿ
ನಿರತಧನ್ಯನಾದೆನು ನಿನ್ನಯ ದರುಶನದಿಂ ||

ಅಲ್ಲಿಂದ ಶ್ರೀ ಕುರುಕನಗರ (ಆಳ್ವಾರ್‌ತಿರುನಗರಿ)ಕ್ಕೆ ಹೋದರು. ಅಲ್ಲಿಂದ ಮುಂದೆ ಅನೇಕ ಪುಣ್ಯಕ್ಷೇತ್ರಗಳ ದರ್ಶನ ಮಾಡಿಕೊಂಡು ಕೊನೆಗೆ ಶಿಷ್ಯರೊಡಗೂಡಿ ಶ್ರೀರಂಗವನ್ನು ತಲುಪಿದರು. ಎಲ್ಲರೂ ಶೇಷಶಾಯಿ ನಾರಾಯಣನ ದರ್ಶನ ಪಡೆದರು. ನಂತರ ತಮ್ಮ ಮಠವನ್ನು ಸೇರಿದರು.

ಯತಿರಾಜರು ಹಿಂದಿರುಗಿದ ಸುದ್ದಿ ಕೇಳಿ ಸ್ತ್ರೀಪುರುಷರಾದಿಯಾಗಿ ಎಲ್ಲರಿಗೂ ಜೀವ ಕಳೆ ಮೂಡಿತು.

ಗುರುಗಳ ಆಗಮನದ ಸುದ್ದಿ ಮುಟ್ಟುತ್ತಲೇ – ಮಹಾತ್ಮ ಕೂರೇಶರು ತಮ್ಮ ಪತ್ನಿ ಹಾಗೂ ಮಗ ಪರಾಶರ, ಇವರುಗಳೊಂದಿಗೆ ರಾಮಾನುಜರ ದರ್ಶನಕ್ಕೆ ಧಾವಿಸಿದರು. ಎಲ್ಲ ಜನರು, ಯಾವ ಯಾವ ಸ್ಥಿತಿಯಲ್ಲಿದ್ದರೋ, ಬಿಟ್ಟು, ಓಡೋಡಿ ಬಂದರು. ಅಂದು ಮಠದಲ್ಲಿ ದೊಡ್ಡ ಪರ್ವದಂತೆ ಕಂಡಿತು.

ಯತಿರಾಜರೂ ಕೂರೇಶರೂ ಕೂಡಿದಾಗ ಅವರಿಬ್ಬರಲ್ಲಿ ಅಪೂರ್ವಾನಂದಾನುಭವ ಉಂಟಾಯಿತು.

ಎರಡು ವರ್ಷಗಳು ಕಳೆದವು. ಕೂರೇಶರು ಹಾಸಿಗೆ ಹಿಡಿದರು.

ಒಂದು ದಿನ ಯತಿರಾಜರೂ ಅವರ ಭಕ್ತರೂ ಕೂರೇಶರನ್ನು ಸುತ್ತುವರಿದು ಸ್ವಾಮಿಯ ಭಜನೆ ಮಾಡುತ್ತಿದ್ದರು.

**ರಾಗ-ಕಾಂಬೊ** **ಝಂಪೆತಾಳ**

ಇದುಭಾಗ್ಯ ಇದುಭಾಗ್ಯವಿದುಭಾಗ್ಯವಯ್ಯ ||ಪ||
ಪದುಮನಾಭನ ಪಾದ ಭಜನೆ ಸುಖವಯ್ಯ ||ಅ||
ಕಲ್ಲಾಗಿ ಇರಬೇಕು ಕಠಿನ ಭವ ತೊರೆಯೊಳಗೆ |
ಬಿಲ್ಲಾಗಿ ಇರಬೇಕು ಬಲ್ಲವರೊಳು | ಮೆಲ್ಲನೆ ಮಾಧವನ
ಮನವ ಮೆಚ್ಚಿಸಬೇಕು | ಬೆಲ್ಲವಾಗಿರಬೇಕು ಬಂಧುಜನರೊಳಗೆ ||

ವಿಷಯ ಭೋಗದ ತೃಣಕೆ ಉರಿಯಾಗಿರಲುಬೇಕು |
ನಿಶಿಹಗಲು ಶ್ರೀಹರಿಯ ನೆನೆಯ ಬೇಕು ||
ವಸುಧೇಶ ಸಿರಿಪುರಂದರ ವಿಠಲ ರಾಯನ |
ಹಸನಾದ ದಾಸರನು ಸೇವಿಸಲುಬೇಕು ||

ಆ ಸಮಯದಲ್ಲಿ ಸ್ವಾಮಿಯ ನಾಮಸ್ಮರಣೆಯನ್ನು ಕೇಳುತ್ತಾ ಆನಂದ ಬಾಷ್ಪವನ್ನು ಸುರಿಸುತ್ತಾ, ಯತಿರಾಜರ ಕಮಲಾಂಘ್ರಿಗಳನ್ನು ತಮ್ಮ ಎದೆಯ ಮೇಲಿಟ್ಟುಕೊಂಡು ಕೂರೇಶರು ದೇಹವನ್ನು ತ್ಯಜಿಸಿದರು. ಎಲ್ಲರೂ ಶೋಕ ಸಾಗರದಲ್ಲಿ ಮುಳುಗಿದರು.

ಯತಿರಾಜರೂ ಕಣ್ಣೀರು ಹಾಕಿದರು. ಆದರೆ ಇತರೆಯವರನ್ನು ಸಂತೈಸುತ್ತಾ ಘೋಷಿಸಿದರು –

"ಎಲೈ ಭಗವದ್ಭಕ್ತರೇ, ಕೂರೇಶರ ಮಗ ಪರಾಶರ ನಿಜಕ್ಕೂ ಶ್ರೀ ರಂಗನಾಥ ಸ್ವಾಮಿಯ ಮಗನೇ ಹೌದು. ಇಂದಿನಿಂದ ನೀವು ಆತನನ್ನು ನಿಮ್ಮ ರಾಜನೆಂದು ಪರಿಗ್ರಹಿಸಿ. ಇನ್ನು ಮುಂದೆ ಆತನೇ ವೈಷ್ಣವ ಸಾಮ್ರಾಜ್ಯವನ್ನು ತನ್ನ ಅಧೀನದಲ್ಲಿಟ್ಟು ಕೊಳ್ಳುವನು.

ಅವನಲ್ಲಿಯೂ ತಂದೆಯಂತೆ ಭಕ್ತಿ ತುಂಬಿತುಳುಕಾಡುತ್ತಿದೆ. ಆತನ ಆಳವಾದ ಜ್ಞಾನ ಅದ್ವಿತೀಯವಾದದ್ದು" ಎಂದು ತಿಳಿಸಿ ಯತಿರಾಜರೇ ಪರಾಶರನನ್ನು ಸಿಂಹಾಸನದ ಮೇಲೆ ಕೂಡಿಸಿ, ಹೂವಿನ ಕಿರೀಟ ಧರಿಸಿ, ಹೂಹಾರಗಳಿಂದ ಆತನನ್ನು ಅಲಂಕರಿಸಿದರು. ಆತನನ್ನು ಆಶೀರ್ವದಿಸುವಂತೆ ಅಲ್ಲಿಯ ಜನರಿಗೆ ತಿಳಿಸಿದರು. ತಾವೂ ಸಹ ಪರಾಶರನನ್ನು ಆಲಿಂಗಿಸಿಕೊಂಡು' ವೈಷ್ಣವ ಶಕ್ತಿಯನ್ನು ಆತನಿಗೆ ಧಾರೆ ಎರೆದರು.

ಕೂರೇಶರ ಪವಿತ್ರ ದೇಹದ ಅಗ್ನಿ ಸಂಸ್ಕಾರವನ್ನು ಕಾವೇರಿ ನದಿಯ ದಂಡೆಯಲ್ಲಿ ಮಾಡಿದರು. ಇಡೀ ದಿನವೆಲ್ಲಾ ಸಾಮೂಹಿಕ ಭಜನೆಯಲ್ಲಿ ಕಳೆಯಿತು. ಯತಿರಾಜರ ಪ್ರಭಾವದಿಂದ ಜನರ ದುಃಖ ಮಾಯವಾಯಿತು.

ಅಲ್ಲಿಂದ ಮುಂದೆ ಯತಿರಾಜರು ಶ್ರೀರಂಗವನ್ನು ಬಿಡಲಿಲ್ಲ. ನೂರಾರು ಯಾತ್ರಾರ್ಥಿಗಳು ಅವರ ದರ್ಶನಕ್ಕಾಗಿ ಬರುತ್ತಿದ್ದರು. ಅವರಿಗೆ ಈಗ 60 ವರ್ಷಗಳಾಗಿದ್ದವು. ಈ ಘಟನೆಯ ನಂತರ ಇನ್ನೂ 60 ವರ್ಷಗಳು ಶ್ರೀ ರಂಗನಾಥ ಸ್ವಾಮಿಯ ಪಾದಾರ್ಚನೆಯಲ್ಲಿ ಆನಂದಭರಿತರಾಗಿ ಕಾಲ ಕಳೆದರು.

ಆಂಧ್ರಪೂರ್ಣರು ಯಾವಾಗಲೂ ಯತಿರಾಜರ ಸೇವೆಯಲ್ಲಿರುತ್ತಿದ್ದರು. ಅವರು ರಾಮಾನುಜರನ್ನೇ ದೇವರು ಹಾಗೂ ಸರ್ವಸ್ವವೆಂದು ಭಾವಿಸಿದ್ದರು.

ಒಂದು ದಿನ ಶ್ರೀ ರಂಗನಾಥಸ್ವಾಮಿ ಸುಂದರ ಹೂಹಾರಗಳಿಂದ ಅಲಂಕೃತನಾಗಿ ತನ್ನ ಪರಿವಾರದವರೊಂದಿಗೆ ಭಕ್ತರಿಗೆ ದರ್ಶನ ನೀಡಲು ದೇವಸ್ಥಾನದಿಂದ ಹೊರಬಂದನು.

ರಾಮಾನುಜರೂ ಸ್ವಾಮಿಯ ದರ್ಶನಕ್ಕಾಗಿ ಇತರೇ ಶಿಷ್ಯರೊಂದಿಗೆ ಮಠದ ಹೊರ ಬಂದರು. ಆದರೆ ಆಂಧ್ರಪೂರ್ಣರು ಸ್ವಾಮಿಯ ದರ್ಶನಕ್ಕೆ ಬರಲಿಲ್ಲ. ಕಾರಣ ರಾಮಾನುಜರಿಗೆ ಕೊಡಲು ಹಾಲು ಕಾಯಿಸುತ್ತಿದ್ದರು. ಹಾಲನ್ನು ಒಲೆಯ ಮೇಲೆಯೇ ಬಿಟ್ಟುಬರಲು ಸಾಧ್ಯವಾಗಲಿಲ್ಲ.

**ರಾಮಾನುಜರು:** ಓ ಆಂಧ್ರಪೂರ್ಣರೇ, ನೀವು ಸ್ವಾಮಿಯ ದರ್ಶನಕ್ಕೆ ಬರಲಿಲ್ಲವೇಕೆ?

**ಆಂಧ್ರಪೂರ್ಣರು:** ಪೂಜ್ಯರೇ, ನಾನು ನನ್ನ ಸ್ವಾಮಿಗೆ ಮಾಡಬೇಕಾಗಿರುವ ಸೇವೆಯನ್ನು ನಿಲ್ಲಿಸಿ ಹೊರಗೆ ಶ್ರೀ ರಂಗನಾಥ ಸ್ವಾಮಿಯ ದರ್ಶನ ಪಡೆಯಲು ಸಾಧ್ಯವಾಗಲಿಲ್ಲ. ಅಡಿಗೆಯಲ್ಲಿ ತೊಡಗಿದ್ದೆನಾದ್ದರಿಂದ ಹೊರಗೆ ಬರಲಾಗಲಿಲ್ಲ. **ಅನಂತಾಚಾರ್ಯರು** ಯತಿರಾಜರ ಆಜ್ಞಾನುಸಾರ ತಮ್ಮ ಪತ್ನಿಯೊಂದಿಗೆ ಶ್ರೀ ಶೈಲಕ್ಕೆ ಹೋಗಿ ನೆಲೆಸಿದರು - ಅಲ್ಲಿ ಯಾವಾಗಲೂ ಜೀವನಿಗೆ ಆಶ್ರಯದಾತನಾದ ದೇವರ ಆರಾಧನೆಯಲ್ಲಿ ತೊಡಗಿದ್ದರು.

ಅಲ್ಲಿಯ ಜನರಿಗೆ ನೀರಿನ ತೊಂದರೆಯಿತ್ತು. ತಾವು ಒಂದು ಕೊಳವನ್ನು ತಮ್ಮ ಕೈಯಿಂದಲೇ ನಿರ್ಮಿಸಬೇಕೆಂದು ತೀರ್ಮಾನಿಸಿದರು.

ಅವರು ಭೂಮಿಯನ್ನು ಅಗೆಯ ತೊಡಗಿದರು. ಅವರ ಪತ್ನಿ ಆ ಮಣ್ಣನ್ನು ಮಕ್ಕರಿಯಲ್ಲಿ ಹೊತ್ತು ದೂರ ಸಾಗಿಸುತ್ತಿದ್ದಳು. ಒಂದೆರಡು ವರ್ಷಗಳು ದಂಪತಿಗಳಿಬ್ಬರೂ ಈ ಕೆಲಸದಲ್ಲಿ ತೊಡಗಿದ್ದರು.

ಒಮ್ಮೆ ಗರ್ಭವತಿಯಾದ ಅವರ ಹೆಂಡತಿ ಮಣ್ಣನ್ನು ಬಹಳ ನಿಧಾನವಾಗಿ ಸಾಗಿಸುತ್ತಿದ್ದಳು. ಆಕೆಗೆ ಆಯಾಸ ಹೆಚ್ಚಿತು. ಒಂದು ಮರದ ಕೆಳಗೆ ನಿದ್ರೆ ಹೋದಳು.

ಆಗ ಆಕೆಯ ಈ ಸ್ಥಿತಿಯನ್ನು ನೋಡಿ, ಎಲ್ಲರ ದುಃಖವನ್ನು ನಿವಾರಿಸುವ ಶ್ರೀಹರಿ ಆಕೆಯ ರೂಪದಲ್ಲೇ ಮಣ್ಣನ್ನು ಸಾಗಿಸಲು ಬಂದನೆಂದು ಪ್ರತೀತಿ.

ಶ್ರೀ ಹರಿಯು ಮಣ್ಣು ಸಾಗಿಸುವ ಕೆಲಸವನ್ನು ಭರದಿಂದ ಮಾಡಲಾಗಿ ವಿಸ್ಮಯಗೊಂಡ ಅನಂತಾಚಾರ್ಯರು ಆಕೆಯನ್ನು ಪ್ರಶ್ನಿಸಿದರು – "ನೀನು ಕೈಲಾಗದೆ ಬಹಳ ನಿಧಾನವಾಗಿ ಮಣ್ಣನ್ನು ಸಾಗಿಸುತ್ತಿದ್ದೆ. ಈಗ ಭರದಿಂದ ಸಾಗಿಸುತ್ತಿರುವೆ. ಹೇಗೆ ಸಾಧ್ಯವಾಯಿತು?

ಸ್ವಾಮಿಯು ಏನೂ ಉತ್ತರ ಕೊಡದೆ ನಕ್ಕನು. ಅನುಮಾನದಿಂದ ಆಚಾರ್ಯರು ಆಗೆಯುತ್ತಿದ್ದ ಕೆಲಸವನ್ನು ಬಿಟ್ಟು ಕೊಳದಿಂದ ಮೇಲಕ್ಕೆ ಬಂದು ನೋಡಲಾಗಿ ತನ್ನ ಹೆಂಡತಿ ಕೊಳದ ಬಳಿಯ ಮರದ ಕೆಳಗೆ ನಿದ್ರಿಸುತ್ತಿದ್ದಳು.

ಆಚಾರ್ಯರು ದುರು ದುರನೆ ನೋಡುತ್ತಾ ತನ್ನ ಕೈಯಲ್ಲಿದ್ದ ಗುದ್ದಲಿಯನ್ನು ಮೇಲೆತ್ತಿದ್ದರು.

"ನೀನು ದೊಡ್ಡ ಮಾಯಾವಿ. ಇಡೀ ಜಗತ್ತನ್ನೇ ಮಾಯೆಯಲ್ಲಿ ಮುಳುಗಿಸಿದ್ದೀಯೆ. ಇದು ಸಾಲದೆ? ಈ ದಿನ ನೀನು ನಮ್ಮನ್ನು, ಬ್ರಾಹ್ಮಣ ದಂಪತಿಗಳನ್ನು ಮೋಸಪಡಿಸಲು ಈ ಸ್ತ್ರೀ ರೂಪವನ್ನು ಧರಿಸಿ ನಮ್ಮನ್ನು ನಿನ್ನ ಸೇವೆ ಮಾಡಿ ಗಳಿಸುವ ಪುಣ್ಯದಿಂದ ವಂಚಿತರನ್ನಾಗಿಸಬೇಕೆಂದು ಬಂದಿರುವೆಯಾ? ಅಥವಾ ನಿನ್ನ ಭಕ್ತರ ಕಷ್ಟವನ್ನು ಹಂಚಿಕೊಳ್ಳಲು ಬಂದಿರುವೆಯಾ? ಹೇ ಸ್ವಾಮಿ ನಮ್ಮ ಸೇವೆಯನ್ನು ಭಂಗಪಡಿಸಿ, ನಮಗೇಕೆ ಕಷ್ಟವನ್ನು ಕೊಡುತ್ತಿರುವೆ. ಏಕೆ ಈ ರೀತಿ ನಿನಗೆ ನೀನೇ ತೊಂದರೆಪಡುವೆ?" ಈ ರೀತಿ ಸ್ವಾಮಿಯನ್ನು ದಂಡಿಸಿದರು. ಆದರೆ ತಮ್ಮ ಸೇವೆ ಮಾಡಲು ಬಂದಿರುವ ಪರಮಾತ್ಮನನ್ನು ನೋಡಿ ಆನಂದ ಬಾಷ್ಪ ಸುರಿಸಿದರು. ತಮ್ಮ ಕೈಯಿಂದ ಗುದ್ದಲಿ ಜಾರಿ ಬಿತ್ತು. ಆಗ ಸ್ವಾಮಿ ಶ್ರೀ ಕೃಷ್ಣನಾಗಿ ತನ್ನ ಸ್ವರೂಪವನ್ನು ತೋರಿಸಿದನು.

ಆಚಾರ್ಯರ ಪತ್ನಿಯನ್ನೂ ಸಹ ಎಚ್ಚರಗೊಳ್ಳುವಂತೆ ಮಾಡಿ, ಆಕೆಗೂ ತನ್ನ ದರ್ಶನ ಕೊಟ್ಟನು.

ಆಗ ಆಚಾರ್ಯರು ತನ್ನ ಆರಾಧ್ಯದೇವನಾದ ಕೃಷ್ಣನನ್ನು ನೋಡಿ ಆನಂದದಿಂದ ಕುಣಿಯುತ್ತಾ ಗುಣಗಾನ ಮಾಡಿದರು.

ಕಂಡೆನಾಗೋವಿಂದನ । ಪುಂಡರೀಕಾಕ್ಷ ಪಾಂಡವಪಕ್ಷ ಕೃಷ್ಣನ ॥ಪ॥
ಕೇಶವನಾರಾಯಣ ಶ್ರೀ ಕೃಷ್ಣನ । ವಾಸುದೇವ ಅಚ್ಯುತಾನಂತನ ॥
ಸಾಸಿರನಾಮದಶ್ರೀ ಹೃಷೀಕೇಶನ । ಶೇಷಶಯನನಮ್ಮ
ವಸುದೇವಸುತನ ॥೧॥ ಮಾಧವ ಮಧುಸೂದನ ತ್ರಿವಿಕ್ರಮನ ।
ಯಾದವ ಕು ಲವಂದ್ಯನ ॥ ವೇದಾಂತವೇದ್ಯನ ಇಂದಿರಾರಮಣನ ।
ಆದಿಮೂರುತಿ ಪ್ರಹ್ಲಾದವರದನ ॥೨॥

ಸ್ವಾಮಿಯು ಈ ರೀತಿ ತನ್ನ ಭಕ್ತರ ಮೇಲೆ ಕೃಪೆ ಬೀರಿ ಅದೃಶ್ಯನಾದನು.

ಇಂದೂ ಸಹ ಶ್ರೀ ಶೈಲದಲ್ಲಿ ಅನಂತಾಚಾರ್ಯರು ನಿರ್ಮಿಸಿದ ಕೊಳ**ಅನಂತ ಸರೋವರ** ವೆಂದೆನಿಸಿ ಆ ಮಹಾತ್ಮರ ನೆನಪು ನೀಡುತ್ತಿದೆ.

ಈ ಘಟನೆಯನ್ನು ವರ್ಣಿಸುವ ಮತ್ತೊಂದು ಕಥೆ ಇದೆ.

ಶ್ರೀ ಶ್ರೀನಿವಾಸನು ಬಾಲಕನಾಗಿ ಬಂದು ಆಚಾರ್ಯರ ಹೆಂಡತಿಗೆ ಮಣ್ಣು ಸಾಗಿಸುವಲ್ಲಿ ಸಹಾಯಕನಾದನು. ಬೇಗಬೇಗ ಮಣ್ಣು ಸಾಗಿಸುತ್ತಿದ್ದನು.

ತನ್ನ ಹೆಂಡತಿ ಇಷ್ಟು ಬೇಗ ಬೇಗನೆ ಮಣ್ಣು ಸಾಗಿಸುತ್ತಿರುವುದನ್ನು ನೋಡಿ ಆಚಾರ್ಯರು ತಮ್ಮ ಪತ್ನಿಯನ್ನು ಕೇಳಿದರು. ಆಗ ಅವರಿಗೆ ಒಬ್ಬ ಬಾಲಕ ಆಕೆಗೆ ಸಹಾಯ ಮಾಡುತ್ತಿದ್ದಾನೆಂದು ತಿಳಿಯಿತು. ಕೂಡಲೇ ಆಚಾರ್ಯರು ತಮ್ಮ ಸೇವೆಯಲ್ಲಿ ಅನಿರೀಕ್ಷಿತವಾಗಿ ಆ ಬಾಲಕ ಅಡ್ಡಿ ಮಾಡುತ್ತಿರುವನೆಂದು ತಿಳಿದು ಕೋಪಗೊಂಡರು. ಹಾರೆಯಿಂದ ಆ ಬಾಲಕನ ಗಲ್ಲಕ್ಕೆ ಹೊಡೆದರಂತೆ. ಬಾಲಕ ಅಲ್ಲಿಂದ ಓಡಿ ಹೋದನಂತೆ.

ಆದರೆ ಬೆಳಗಾಗ ದೇವಸ್ಥಾನದಲ್ಲಿ ಸ್ವಾಮಿಯ ದರ್ಶನಕ್ಕೆ ಹೋದ ಪರಿಚಾರಕರೂ, ಅನಂತಾಚಾರ್ಯರೂ ಸ್ವಾಮಿಯ ಗಲ್ಲದಿಂದ ರಕ್ತಸುರಿಯುತ್ತಿದ್ದುದನ್ನು ನೋಡಿದರು. ಆಗ ಅರ್ಚಕರು ಸ್ವಾಮಿಯ ಗಲ್ಲಕ್ಕೆ ರಕ್ತವನ್ನು ನಿಲ್ಲಿಸಲು ಕರ್ಪೂರ ಹಚ್ಚಿದರೆಂದು, ಇಂದೂ ಸಹ ಸ್ವಾಮಿಯ ಗಲ್ಲಕ್ಕೆ ಕರ್ಪೂರದ ಪುಡಿಯನ್ನು ಹಚ್ಚಿ ಆರಾಧಿಸುತ್ತಾರೆ. ಆ ಕರ್ಪೂರವನ್ನು ಪ್ರಸಾದವಾಗಿ ಭಕ್ತರಿಗೆ ಹಂಚುತ್ತಾರೆ.

ರಾಮಾನುಜರು ವಿಶಾಲ ಮನಸ್ಸಿನ ಶುದ್ಧಹೃದಯದ ಭಕ್ತರಿಗೆ ತನ್ನ ದಾಸ್ಯ-ಭಕ್ತಿಯನ್ನು ಹೇಗೆ ಸಮರ್ಪಿಸುತ್ತಿದ್ದರೆಂಬುದಕ್ಕೆ ಇದೊಂದು ನಿದರ್ಶನವಾಗಿದೆ.

ಒಮ್ಮೆ ಭಕ್ತನೂ, ಸರಳ ಹೃದಯನೂ ಆದ ಒಬ್ಬ ಬ್ರಾಹ್ಮಣ ಯತಿರಾಜರಲ್ಲಿಗೆ ಬಂದು ಪ್ರಾರ್ಥಿಸಿದನು – "ಗುರುವರ್ಯಾ, ನಾನು ನನ್ನ ಆತ್ಮವನ್ನು ತಮ್ಮ ಸೇವೆ ಮಾಡಿ ಪರಿಶುದ್ಧಗೊಳಿಸ ಬೇಕೆಂದಿದ್ದೇನೆ. ಈ ತಾಪತ್ರಯಗಳ (ಆದಿಭೌತಿಕ, ಆದಿದೈವಿಕ ಮತ್ತು ಅಧ್ಯಾತ್ಮಿಕ ದುಃಖಗಳ) ಹಿಡಿತದಿಂದ ಪಾರುಗಾಣ ಬೇಕೆಂದಿದ್ದೇನೆ. ಈ ರೀತಿ ಎಲ್ಲಾ ದುಃಖಗಳಿಂದ ನನ್ನನ್ನು ರಕ್ಷಿಸಬೇಕು".

**ರಾಮಾನುಜರು:** ಓ ಬ್ರಾಹ್ಮಣರೇ, ನಿಮ್ಮ ಆಲೋಚನೆಯೇನೋ ಸರಿ. ಜೀವರುಗಳ ಸೇವೆ ಮಾಡುವುದಕ್ಕಿಂತ ಮಿಗಿಲಾದ ಮಾರ್ಗ ಮತ್ತೊಂದಿಲ್ಲ. ನಿಮ್ಮ ಸೇವೆಯಿಂದ ತೃಪ್ತಿಪಡಿಸುವುದಾದರೆ ನನ್ನ ಮಾತಿನಂತೆ ನೀವು ನಡೆದುಕೊಳ್ಳಬೇಕು.

**ಬ್ರಾಹ್ಮಣ:** "ಪೂಜ್ಯರೇ, ನಾನು ಸಿದ್ಧನಿದ್ದೇನೆ. ಅದೇನೆಂದು ದಯವಿಟ್ಟು ತಿಳಿಸಿ".

**ರಾಮಾನುಜರು:** ಎಲೈ ಪೂಜ್ಯ ಬ್ರಾಹ್ಮಣರೇ, ನಿಮ್ಮ ತತ್ಪರತೆಯನ್ನು ನೋಡಿ ಮೆಚ್ಚಿದ್ದೇನೆ. ನಿತ್ಯವೂ ನಾನು ಒಬ್ಬ ಬ್ರಾಹ್ಮಣನ ಪಾದ ಸ್ಪರ್ಶದ ಜಲವನ್ನು ತೆಗೆದುಕೊಂಡು ಪರಿಶುದ್ಧನಾಗಿ ನನ್ನ ನಿತ್ಯ ಪೂಜೆಯಲ್ಲಿ ತೊಡಗಬೇಕೆಂದಿದ್ದೇನೆ. ಶ್ರೀ ಹರಿಯ ಕೃಪೆಯಿಂದ ಶುದ್ಧಸ್ವಭಾವವುಳ್ಳ ನೀವು ನನಗೆ ದೊರೆತಿದ್ದೀರಿ. ಇಲ್ಲಿಯೇ ಇದ್ದುಕೊಂಡು ನಿಮ್ಮ ಪಾದೋದಕವನ್ನು ನಿತ್ಯವೂ ನನಗೆ ಕೊಟ್ಟು ಧನ್ಯನನ್ನಾಗಿ ಮಾಡಿರಿ. ನೀವು ಹೀಗೆ ಮಾಡಿದರೆ ಮಾತ್ರ ನನ್ನ ನಿಜವಾದ ಸೇವೆ ಮಾಡಿದಂತಾಗುತ್ತದೆ.

ಬ್ರಾಹ್ಮಣರು ಇದಕ್ಕೆ ಒಪ್ಪಿಗೆ ಕೊಟ್ಟರು.

ರಾಮಾನುಜರು ನಿತ್ಯವೂ ಮಧ್ಯಾಹ್ನ ಕಾವೇರಿಯಲ್ಲಿ ಸ್ನಾನಮಾಡಿ ಬಂದು ಈ ಬ್ರಾಹ್ಮಣರ ಪವಿತ್ರ ಪಾದೋದಕವನ್ನು ತೆಗೆದುಕೊಂಡು ತಮ್ಮ ಇಷ್ಟದೇವರ ಪೂಜೆಗೆ ಕುಳಿತುಕೊಳ್ಳುತ್ತಿದ್ದರು.

ಒಂದು ದಿನ ಕಾವೇರಿಯಲ್ಲಿ ಸ್ನಾನ ಮುಗಿಸಿ ಬರುವಾಗ್ಗೆ ತಮ್ಮ ಶಿಷ್ಯರಲ್ಲೊಬ್ಬರು ನತಮಸ್ತಕರಾಗಿ, ವಿನಯದಿಂದ ಆ ದಿನ ತಮ್ಮ ಮನೆಗೆ ಭಿಕ್ಷೆಗೆ ಬರಬೇಕೆಂದು ಪ್ರಾರ್ಥಿಸಿ ಕೊಂಡರು.

ರಾಮಾನುಜರಿಂದ ಅವರ ಪ್ರಾರ್ಥನೆಯನ್ನು ನಿರಾಕರಿಸಲಾಗಲಿಲ್ಲ. ನೇರ ಅವರ ಮನೆಗೆ ಹೋದರು. ಶ್ರೀ ನಾರಾಯಣನ ಪೂಜೆಯ ನಂತರ ನೈವೇದ್ಯವನ್ನು ಸ್ವೀಕರಿಸಿ ಸ್ವಲ್ಪ ಹೊತ್ತು ವಿಶ್ರಮಿಸಿದರು. ನಂತರ ಅಲ್ಲಿ ನೆರೆದಿದ್ದ ಭಕ್ತರೊಂದಿಗೆ ಅಧ್ಯಾತ್ಮಿಕ ಚರ್ಚೆಯಲ್ಲಿ

ತಲ್ಲೀನರಾದರು. ಆ ದಿನ ಅಲ್ಲಿಯೇ ರಾತ್ರಿಯಾಯಿತು. ಯತಿರಾಜರು ಆ ನಡು ರಾತ್ರಿಯಲ್ಲಿ ಮಠಕ್ಕೆ ಬಂದರು.

ಮಠದಲ್ಲಿ ಉದಾರ ಮನಸ್ಸುಳ್ಳ ಈ ಬ್ರಾಹ್ಮಣರು ತಮ್ಮ ಸ್ಥಳದಲ್ಲೇ ಕುಳಿತಿದ್ದರು. ಅವರನ್ನು ನೋಡುತ್ತಲೇ ಯತಿರಾಜರು ದಿಗ್ಭ್ರಾಂತರಾದರು.

**ರಾಮಾನುಜರು:** ಹೇ ಮಹಾತ್ಮಾ ತಾವು ನನಗಾಗಿ ಇನ್ನೂ ಕಾದಿರುವಿರಾ? ತಮ್ಮ ಊಟವಾಗಿದೆಯೆಂದು ಭಾವಿಸುತ್ತೇನೆ.

**ಬ್ರಾಹ್ಮಣರು:** ತಮಗೆ ನನ್ನ ಸೇವೆಯನ್ನು ಮುಗಿಸುವನಕ ನಾನು ಪ್ರಸಾದವನ್ನು ಸ್ವೀಕರಿಸುವುದೆಂತು? ನಸುನಕ್ಕರು.

ಬ್ರಾಹ್ಮಣರ ಮಾತನ್ನು ಕೇಳಿ ಅತ್ಯಂತ ಸುಪ್ರೀತರಾಗಿ ಯತಿರಾಜರು ಹೇಳಿದರು –

**ಗೌಳ**

ಕಂದ॥ ತಾವು ಪರಮಧ್ವನ್ಯರಹೆರಿ
೯ ಅವಿಚ್ಛಿನ್ನದಾಸ್ಯಭಕ್ತಿಯನಪ್ಪಿ ಮುದದಿಂ
ಭವದ ಬಂಧಂಗಳ ಬಿಟ್ಟು
ತವ ಹೃದಯದಿ ಸೆರೆಹಿಡಿದಿರಿ ಪರಮ ವಿಷ್ಣುವಂ ॥

ಎಂದು ಅವರನ್ನು ಹೊಗಳುತ್ತಾ ಅವರ ಪಾದೋದಕವನ್ನು ಸಾರಿ ಸಾರಿ ಕುಡಿದರು. ತಮ್ಮ ಶಿಷ್ಯರಿಗೂ ಕೊಟ್ಟರು.

ಯತಿರಾಜರ ಪ್ರಭಾವದಿಂದ ಆ ಬ್ರಾಹ್ಮಣರೂ ಸಹ ಪುನೀತರಾದರು.

# 30

# ಶ್ರೀ ರಾಮಾನುಜರ ಪ್ರತಿಮೆಯ ಪ್ರತಿಷ್ಠಾಪನೆ ಮತ್ತು ದೇಹತ್ಯಾಗ

ಮೇಲುಕೋಟೆಯಿಂದ ರಾಮಾನುಜರು ಶ್ರೀರಂಗಕ್ಕೆ ಹೊರಡಲನುವಾದಾಗ, ಭಕ್ತರೆಲ್ಲಾ ಶೋಕಗ್ರಸ್ತರಾದರು. ಅವರನ್ನಗಲಿ ಇರುವುದು ಹೇಗೆ ಎಂದು ಆಲೋಚಿಸಿದರು.

ದುಃಖ ಸಂತಪ್ತ ಭಕ್ತರ ಸಮಾಧಾನಕ್ಕಾಗಿ ಶ್ರೀ ರಾಮಾನುಜರು ತಮ್ಮದೇ ಆದ ಒಂದು ವಿಗ್ರಹವನ್ನು ಮಾಡಿಸಿ, ತಮ್ಮ ಶಕ್ತಿಯನ್ನು ಅದಕ್ಕೆ ತುಂಬಿ ಯದುಗಿರಿಯ ಭಕ್ತರಿಗೆ ಒಪ್ಪಿಸಿದರು.

"ನನ್ನ ಪ್ರಿಯ ಬಾಂಧವರೇ, ಈ ನನ್ನ ವಿಗ್ರಹವನ್ನು ಸ್ವಯಂ ನಾನೇ ಎಂದು ಭಾವಿಸಿರಿ. ನಿಮಗೆ ನನ್ನನ್ನು ಕಾಣಬೇಕೆನಿಸಿದಾಗ ಇದನ್ನು ನೋಡಿ ನಿಮ್ಮ ಮನಶ್ಶಾಂತಿಯನ್ನು ಪಡೆಯಬಹುದು".

ಹೀಗ್ಹೇಳಿ ಆ ಭಕ್ತ ವೃಂದದಿಂದ ದೂರ ಹೋದರು. ಕೆಲಕಾಲದ ನಂತರ ಶ್ರೀ ರಾಮಾನುಜರ ಜನ್ಮಸ್ಥಳವಾದ ಶ್ರೀ ಪೆರುಂಬುದೂರಿನಲ್ಲಿ ಭಕ್ತರೆಲ್ಲಾ ಸೇರಿ ಅವರ ವಿಗ್ರಹವನ್ನು ಮಾಡಿಸಿ, ವೇದೋಕ್ತವಾಗಿ ಅದಕ್ಕೆ ಜೀವಕಳೆ ತುಂಬಿ, ದೊಡ್ಡ ದೇವಾಲಯದಲ್ಲಿ ಅದನ್ನು ಪ್ರತಿಷ್ಠಾಪಿಸಿದರು.

ಅದೇ ಸಮಯದಲ್ಲಿ ಶ್ರೀ ರಾಮಾನುಜರು ಶ್ರೀ ರಂಗದ ಮಠದಲ್ಲಿ ತಮ್ಮ ಶಿಷ್ಯರಿಗೆ ಶಾಸ್ತ್ರಾರ್ಥಗಳನ್ನು ಬೋಧಿಸುತ್ತಿದ್ದರು. ಇದ್ದಕ್ಕಿದ್ದಂತೆ ಸ್ತಬ್ಧರಾಗಿ ಅಂತರ್ಮುಖರಾದರು. ಅವರ ಕಣ್ಣುಗಳ ಅಂಚಿನಿಂದ ಎರಡು ತೊಟ್ಟು ರಕ್ತ ಹೊರಚಿಮ್ಮಿತು.

ಸ್ವಲ್ಪ ಸಮಯದ ಮೇಲೆ ಅವರು ಬಹಿರ್ಮುಖರಾದಾಗ ಆಶ್ಚರ್ಯ ಚಕಿತರಾದ ಶಿಷ್ಯರು ಗುರುಗಳನ್ನು ಈ ರೀತಿ ಆಗಲು ಕಾರಣವನ್ನು ತಿಳಿಸಬೇಕೆಂದು ಅರಿಕೆ ಮಾಡಿಕೊಂಡರು.

**ರಾಮಾನುಜರು:** ಈ ದಿನ ಶ್ರೀ ಪೆರಂಬುದೂರಿನ ಜನರು, ತಮ್ಮ ಪ್ರೀತಿಯಿಂದ ನನ್ನನ್ನು ಸೆರೆ ಹಿಡಿದರು. ನನ್ನ ವಿಗ್ರಹಕ್ಕೆ ಜೀವ ಕಳೆಕೊಟ್ಟು ವೇದೋಕ್ತ ಪ್ರಕಾರ ವಿಗ್ರಹದ ಕಣ್ಣುಗಳನ್ನು ತೆರೆಸಿದ್ದಾರೆ.

ಗುರುಗಳ ಈ ಮಾತುಗಳನ್ನು ಕೇಳಿದ ಅವರು – 'ನಾವೇ ಧನ್ಯರೆಂದು ಕೊಂಡರು'.

ನಿಜಕ್ಕೂ ಶ್ರೀರಂಗದ ನಿವಾಸಿಗಳು ಭಾಗ್ಯವಂತರು. ಯತಿರಾಜರು ತಮ್ಮ ಜೀವಿತದ ಅಂತಿಮ 60 ವರ್ಷಗಳನ್ನು ಬೇರೆಲ್ಲಿಯೂ ಹೋಗದೆ, ಶ್ರೀ ರಂಗನಾಥಸ್ವಾಮಿಯ ಚರಣ ಸನ್ನಿಧಿಯಲ್ಲೇ ಕಳೆದರು.

ಸಹಸ್ರಾರು ಜನರು, ಸ್ತ್ರೀಪುರುಷರೆನ್ನದೆ, ಅವರ ದರ್ಶನ ಪಡೆಯಲು ಹಾಗೂ ಅವರ ಜ್ಞಾನ–ಭಕ್ತಿವೈರಾಗ್ಯ ಪೂರಿತ ವಾಗಾಮೃತವನ್ನು ಸವಿಯಲು ತತ್ಪರಿಣಾಮವಾಗಿ ಪುಣ್ಯವನ್ನು ಗಳಿಸಲು ಬಂದು ಹೋಗುತ್ತಿದ್ದರು.

ಸ್ವಲ್ಪವೇ ಸಮಯದಲ್ಲಿ ಕಷ್ಟಕಾರ್ಪಣ್ಯಗಳು, ಪಾಪ–ಭೀತಿಗಳಿಂದ ದೂರ ಮಾಡುವ ಅವರ ಬೋಧನೆಗಳ ಪ್ರಭಾವದಿಂದ ಇಡೀ ದಕ್ಷಿಣ ಭಾರತವೇ ರಾಮರಾಜ್ಯವಾಗಿ ಪರಿಣಮಿಸಿತು.

ಹೀಗೆ ಎಲ್ಲರ ಒಳ್ಳೆಯದಕ್ಕಾಗಿ, ಎಲ್ಲರ ಸಂತೋಷಕ್ಕಾಗಿ ಈ ಭೂಮಿಯ ಮೇಲೆ ಪೂರ್ಣ ಜೀವನ ಸಾಗಿಸಿ, ಈ ಭೂ–ಭಾಗವನ್ನು ವೈಕುಂಠವನ್ನಾಗಿಸಿ, ತಮ್ಮ ಶಿಷ್ಯರನ್ನು ತಮ್ಮ ಮಟ್ಟಕ್ಕೆ ಏರಿಸಿ, ಲಕ್ಷ್ಮಣಸ್ವಾಮಿಯಾದ ಅವರು ಭಗವಾನ್ ಶ್ರೀಮದ್ರಾಮಾನುಜಾ ಚಾರ್ಯರಾಗಿ ಉಭಯ ವಿಭೂತಿಪತಿಯೆಂದೆನಿಸಿ ಕೀರ್ತಿಪಡೆದು ತಮ್ಮ ಶಾಶ್ವತ ಸಾಮ್ರಾಜಕ್ಕೆ ಮರಳಿ ತೆರಳಲು ಸಿದ್ಧರಾದರು. ಅಂತರ್ಮುಖರಾದ ಆಚಾರ್ಯರನ್ನು ನೋಡಿದ ಎಲ್ಲ ಶಿಷ್ಯರೂ ಅನಾಥರಾಗಿ ಅಳತೊಡಗಿದರು. ಕೆಲವರು ಜೋರಾಗಿ ಪ್ರಲಾಪಿಸಿದರು. ಈ ಸಂದರ್ಭದಲ್ಲಿ ಭಕ್ತರ ದಯಾಮಯರಾದ ಯತಿರಾಜರ ಮನಸ್ಸು ಧ್ಯಾನದಿಂದ ಹಿಂದಿರುಗಿತು. ಬಹಿರ್ಮುಖರಾದ ಯತಿರಾಜರು ಎಲ್ಲರನ್ನುದ್ದೇಶಿಸಿ ಹೇಳಿದರು.

,ಮಕ್ಕಳೆ ನಿಮ್ಮಯ । ಪ್ರೀತಿಗೆ ಮೆಚ್ಚಿಹೆನು ।।ಪ।।
,ಅಕ್ಕರೆಯಿಂದಲಿನಾ । ಪೇಳಿದ ತತ್ವಗಳ ।
,ಪಕ್ಕಕೆ ಸರಿಸದೆ । ಧ್ಯಾನಿಸಿ ಅವುಗಳ ।
,ಚೊಕ್ಕ ಶ್ರೀ ರಂಗನು । ಪೊರೆವನು ನಿಮ್ಮನು ।।೧।।

,ನಾನಿಮ್ಮನಗಲಿ । ಇರಲಾರೆನು ಕ್ಷಣವು ।
,ಜ್ಞಾನವ ತಿಳಿಯದ । ಜ್ಞಾನಿಗಳಾಗದಿರಿ ।।
,ಮನದಲಿ ಮಾಯೆಗೆ । ಸ್ಥಾನವ ಕೊಡದಿರಿ ।
,ನಾನು ನೀನು ಎಂಬ । ಭೇದವ ತೊರೆಯಿರಿ ।।೨।।

ಯತಿರಾಜರ ಈ ಉಪದೇಶವನ್ನು ಕೇಳಿ ಎಲ್ಲರೂ ಒಕ್ಕೊರಳಿನಿಂದ ಅರಿಕೆ ಮಾಡಕೊಂಡರು –.

"ಭಗವನ್, ತಮ್ಮ ಮಾತು ಸತ್ಯ. ಆದರೆ ನಮ್ಮ ದುಃಖಗಳನ್ನು ಪರಿಹರಿಸುವ ತಮ್ಮ ಈ ಪವಿತ್ರ ದೇಹವನ್ನು ತಮ್ಮ ಮಕ್ಕಳಾದ ನಮ್ಮ ಮೇಲೆ ಕರುಣೆ ತೋರಿ, ನಮಗಾಗಿ ಇನ್ನೂ ಕೆಲಕಾಲ ತ್ಯಜಿಸಬೇಡಿ".

ಅವರ ಬೇಡಿಕೆಯಂತೆ ಆಚಾರ್ಯರು ಅವರ ಮಧ್ಯೆ ಇರಲು ಇನ್ನೂ ಮೂರು ದಿನಗಳನ್ನು ಮುಂದೆ ತಳ್ಳಿದರು.

ಸಮಸ್ತ ಶಿಷ್ಯರನ್ನೂ ತನ್ನ ಹತ್ತಿರ ಕರೆದರು. ಅವರಿಗೆ ತಮ್ಮ ಬೋಧನೆಯ 74 ರತ್ನಗಳನ್ನು ದಯಪಾಲಿಸಿದರು. ಅವುಗಳು ನಿಜಕ್ಕೂ ಪ್ರಾಪಂಚಿಕ ಸಂಪತ್ತಿಗಿಂತ ಅಮೂಲ್ಯವಾದವುಗಳಾಗಿದ್ದವು.

ಭಾಗ್ಯವಂತನಾದ ಯಾರೇ ಆಗಲಿ ಈ ರತ್ನಗಳಲ್ಲಿ ಒಂದನ್ನಾದರೂ ತನ್ನದನ್ನಾಗಿಸಿ ಕೊಂಡರೆ ಅವನು ಈ ಜೀವನದಲ್ಲಿ ಮಾತ್ರವಲ್ಲ, ಮುಂದಿನ ಜನ್ಮಗಳಲ್ಲೂ ಸುಖಶಾಂತಿಗಳನ್ನನುಭವಿಸುತ್ತಾನೆ.

ಅವರ ಶಿಷ್ಯರನ್ನೆಲ್ಲಾ ಈ ದೈವಿಕ ಸಂಪತ್ತಿನ ಶ್ರೀಮಂತರನ್ನಾಗಿ ಮಾಡಿ ಅವರಿಗೆ ಈ ರೀತಿ ಬೋಧಿಸಿದರು – "ನನ್ನ ಮಕ್ಕಳೇ, ನಿಮ್ಮ ಅಜ್ಞಾನ ಇನ್ನು ದೂರವಾಗುತ್ತದೆ. ನೀವು ಈಗಾಗಲೇ ತಿಳಿದಿದ್ದೀರಿ, ಭಾಗವತ, ಭಕ್ತಿ ಮತ್ತು ಭಗವಾನ್ ಮೂರು ಒಬ್ಬನೇ

ಆಗಿದ್ದಾನೆ. ಅಂದ ಮೇಲೆ ಭಕ್ತ ದೇವರಿಂದ ಬೇರೆಯಾಗಲು ಹೇಗೆ ಸಾಧ್ಯ? ಎಂದೆಂದಿಗೂ ನಾನು ನಿಮ್ಮಲ್ಲಿರುತ್ತೇನೆ, ನೀವು ನನ್ನಲ್ಲಿರುತ್ತೀರಿ. ಈ ಅಸ್ಥಿರ ದೇಹ ಹೋದುದಕ್ಕೆ ಪರಿತಪಿಸಬೇಡಿ”.

ಗುರುಗಳ ಈ ಉಪದೇಶದ ಮಾತುಗಳನ್ನು ಕೇಳಿದ ದಾಶರಥಿಗಳು, ಗೋವಿಂದರು, ಆಂಧ್ರಪೂರ್ಣರು ಮತ್ತೆ ಕೆಲವರು ಬೇಡಿಕೊಂಡರು – “ತಮ್ಮ ಈ ಪಾದಗಳ ಸ್ಪರ್ಶದಿಂದ ನಮ್ಮ ಅಜ್ಞಾನ ನಾಶವಾಯಿತು. ತಮ್ಮ ಉದಾತ್ತ ಹೃದಯ ಶ್ರೀಗೆ ವಾಸಸ್ಥಾನ ಹಾಗೂ ಕರುಣಾಮೃತದ ಕೋಶ, ವಿಷ್ಣುವಿನ ಚಿಹ್ನೆಗಳನ್ನು ಪಡೆದಿರುವ ತಮ್ಮ ಮುಖ ಕಮಲ ಪವಿತ್ರ ಮಾತುಗಳ ಶುದ್ಧಗಂಗೆಯನ್ನೇ ಹರಿಸುತ್ತದೆ. ಇಂತಹ ಸರ್ವಶಕ್ತವಾದ ದೇಹ, ನಾಶ ಹೊಂದಲು ಹೇಗೆ ತಾನೇ ಸಾಧ್ಯ? ಎಲ್ಲಾ ಪ್ರಾಣಿ ದೇಹಗಳು ವಿನಾಶವಾಗುತ್ತವೆ,ಆದರೆ ತಮ್ಮ ದಿವ್ಯದೇಹ ಶಾಶ್ವತವಾದದ್ದು. ಆದ್ದರಿಂದ ನಮ್ಮನ್ನು ತಮ್ಮ ಪವಿತ್ರ ರೂಪದಿಂದ ವಂಚಿತರನ್ನಾಗಿ ದಯವಿಟ್ಟು ಮಾಡಬೇಡಿ”.

ಶಿಷ್ಯರುಗಳ ನೊಂದ ಹೃದಯದ ಈ ಸೌಜನ್ಯ ಮಾತುಗಳನ್ನು ಕೇಳಿ ಆಚಾರ್ಯರಲ್ಲಿ ಕರುಣೆ ಮೂಡಿತು. ಆಗ ಹೇಳಿದರು – “ಕೆಲವು ಚತುರ ಶಿಲ್ಪಿಗಳನ್ನು ಕರೆಸಿ, ನನ್ನ ಶಿಲಾಮೂರ್ತಿಯನ್ನು ಮಾಡಿಸಿ”.

ಮೂರೇ ದಿನಗಳಲ್ಲಿ ಯತಿರಾಜರ ವಿಗ್ರಹ ಪೂರ್ಣಗೊಂಡಿತು. ಪವಿತ್ರ ಕಾವೇರಿಯಲ್ಲಿ ವಿಗ್ರಹಕ್ಕೆ ಸ್ನಾನ ಮಾಡಿಸಿ, ಒಂದು ಸುಂದರ ಪೀಠದ ಮೇಲೆ ಅದರ ಪ್ರತಿಷ್ಠಾಪನೆ ಮಾಡಿದರು. **ಬ್ರಹ್ಮರಂಧ್ರಂ ಸಮಾಘ್ರಾಯ ಸ್ವಶಕ್ತಿಂ ತತ್ರದತ್ತವಾನ್ ।** (ಪ್ರಪನ್ನಾಮೃತ) ಯತಿರಾಜರು ವಿಗ್ರಹದ ಬ್ರಹ್ಮರಂಧ್ರದ ಮೂಲಕ ಊದಿ ತಮ್ಮ ಶಕ್ತಿಯನ್ನೆಲ್ಲಾ ತುಂಬಿದರು. ನಂತರ ಶಿಷ್ಯರನ್ನುದ್ದೇಶಿಸಿ ಹೇಳಿದರು – “ನನ್ನ ಮಕ್ಕಳೇ, ಇದು ನನ್ನ ಎರಡನೆಯ ಆತ್ಮ ನನಗೂ ಇದಕ್ಕೂ ಯಾವ ವಿಧವಾದ ವ್ಯತ್ಯಾಸವೂ ಇಲ್ಲ. ನನ್ನ ಈ ಜೀರ್ಣದೇಹವನ್ನು ತ್ಯಜಿಸಿ, ಈ ಹೊಸದೇಹದಲ್ಲಿ ವಾಸಿಸುತ್ತೇನೆ”. ಹೀಗೆಂದು ಹೇಳಿ ಶ್ರೀ ರಾಮಾನುಜಾಚಾರ್ಯರು ತಮ್ಮ ತಲೆಯನ್ನು ಗೋವಿಂದರ ತೊಡೆಯ ಮೇಲಿರಿಸಿದರು. ತಮ್ಮ ಗುರುಗಳ ಗಂಧದ ಪಾದುಕೆಗಳತ್ತ ತನ್ನ ದೃಷ್ಟಿಯನ್ನು ಹರಿಸಿದರು. ಶ್ರೀ ವಿಷ್ಣುವಿನ ಸಾಮ್ರಾಜ್ಯದಲ್ಲಿ ಸೇರಿಕೊಂಡರು, (ಅಂದು ಶನಿವಾರ, ಶುಕ್ಲದಶಮಿ, ಮಾಘಮಾಸ, ಕ್ರಿ.ಶ. 1137 ಶಕವರ್ಷ 1059).

ಕೆಲವು ದಿನಗಳ ನಂತರ ಗೋವಿಂದರೂ ಸಹ ದೇಹತ್ಯಾಗ ಮಾಡಿದರು. ಉಳಿದ ಶಿಷ್ಯರು ಪರಾಶರ ಭಟ್ಟರ ನೇತೃತ್ವದಲ್ಲಿ ಧರ್ಮಪ್ರಚಾರ ಮಾಡುತ್ತಾ ಯತಿರಾಜರ ಮೂರ್ತಿಯ ಆಶ್ರಯದಲ್ಲಿ ಕಾಲಕಳೆದರು. ಮುಂದೆ ಅವರ ಗುರುಗಳ ಅಗಲಿಕೆಯಿಂದ ಖಿನ್ನರಾಗಲಿಲ್ಲ. ತಮ್ಮ ಭಕ್ತಿ ಪ್ರಭಾವದಿಂದ ಗುರುಗಳ ಸಾನ್ನಿಧ್ಯ ತಮ್ಮ ಹೃದಯದಲ್ಲೇ ದೊರಕುವಂತಾಯಿತು.

**ಯೋ ನಿತ್ಯಮಚ್ಯುತ ಪದಾಂಬುಜ ಯುಗ್ಮರುಕ್ಮ-**
**ವ್ಯಾಮೋಹತಸ್ತದಿತರಾಣಿ ತೃಣಾಯ ಮೇನೇ ।**
**ಅಸ್ಮದ್ಗುರೋರ್ಭಗವತೋಽಸ್ಯ ದಯೈಕಸಿಂಧೋಃ**
**ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ।**

ವೈಕುಂಠಸ್ತವಃ
– ಕೂರೇಶರು

"ಯಾರು ನಿತ್ಯವೂ ಅಚ್ಯುತನ ಪಾದಪದ್ಮಂಗಳ ಸಂಪದವನ್ನು ಪಡೆಯಲಿಚ್ಛಿಸಿದರೋ, ಯಾರು ಇತರೇ ವ್ಯಾಮೋಹಗಳನ್ನು ತೃಣ(ಗರಿಕೆ)ವೆಂದು ತಿಳಿದು ದೂರ ಮಾಡಿದರೋ ಆದಯಾಸಾಗರರಾದ ನಮ್ಮ ಭಗವಾನ್ ಶ್ರೀ ರಾಮಾನುಜರ ಚರಣಗಳಿಗೆ ಶರಣು ಹೋಗುತ್ತೇನೆ".

## ಮಂಗಳಂ

**ರಾಗ-ಮಧ್ಯಮಾವತಿ** **ಆಟತಾಳ**

ಮಂಗಳವು ಶ್ರೀ ರಾಮಾನುಜಗೆ ।
ಮಂಗಳವು ಶ್ರೀ ಗುರುವರ್ಯಗೆ ॥
ಮಂಗಳವು ಲಕ್ಷ್ಮಣಸ್ವಾಮಿಗೆ ।
ಮಂಗಳವು ವೈಷ್ಣವಾಚಾರ್ಯಗೆ ॥೧॥

ಕಂಚಿವರದನ ಭಕ್ತನಿಗೆ ।
ಶ್ರೀ ಭಾಷ್ಯಕಾರಗೆ
ವಿಶಿಷ್ಟಾದ್ವೈತ ಸಿದ್ಧಾಂತವ ।
ಬೋಧಿಸಿದ ಆಚಾರ್ಯಗೆ ॥೨॥

ದೇವದೇವ ಶ್ರೀ ಪಿಷ್ಣುದೇವನ
ಭಕ್ತರನ್ನಾಗಿಸಿ ನಮ್ಮನು ।
ಮುಕ್ತಿಮಾರ್ಗವ ತೋರಿದ ಪರ ।
ಮಾನಂದ ಮೂರ್ತಿಗೆ ॥೩॥

ಹರಿಃ ಓಂ ಹರಿಃ ಓಂ ಹರಿಃ ಓಂ

## ಭಜನೆ

**ರಾಗ-ಶಂಕರಾಭರಣ** **ಆದಿತಾಳ**

ರಾಮಾನುಜಗುರು ರಾಮಾನುಜಗುರು ।
ರಾಮಾನುಜಗುರು ರಾಮಾನುಜ ॥
ರಾಮಾನುಜಗುರು ರಾಮಾನುಜಗುರು ।
ರಾಮಾನುಜಗುರು ರಾಮಾನುಜ ॥ಪ॥

ಲಕ್ಷ್ಮಣಸ್ವಾಮಿ ನೀ ಮರ್ತ್ಯ ಲೋಕದಲಿ
ಜೀವರನುದ್ಧರಿಸಲು ಬಂದೆ ।
ವೈಷ್ಣವಧರ್ಮದ ಪರಿಪಾಲನೆಗೆ
ಲೋಕದಲ್ಲಿ ರಾಮಾನುಜನಾದೆ ॥೧॥

ಪೆರಂಬೂರಿನಲಿ ದೀಕ್ಷಿತ ಅಸೂರಿ
ಕೇಶವಪೆರಮಾಳ್ ಕಾಂತಿಮತಿ ।
ಅವರಿಗೆ ವರಪುತ್ರನಾಗಿ ಜನಿಸಿನೀ
ಬಂದೆಯೊ ನಮ್ಮನು ಕಾಪಾಡಲು ॥೨॥

ಅದ್ವೈತಿಯಾದವ ಪ್ರಕಾಶರಲ್ಲಿ
ಶಿಷ್ಯ ವೃತ್ತಿಯ ಕೈಗೊಂಡೆಯೋ ।
ಅವರ ತತ್ವವನು ಒಪ್ಪದೆ ಕಂಚಿಯ
ವರಧರಾಜನ ಮೊರೆ ಹೋದೆಯೊ ॥೩॥

ವರದನು ನಿನ್ನಯ ಸಂದೇಹಗಳ
ಪರಿಹರಿಸುತ ತಾನರುಹಿದನು ।
ತಾನೇ ಪರತತ್ವವು ಎಂದೆಂದು
ಜೀವರ ಈಶ್ವರ ಭೇದ ಸ್ಥಿರವೆಂದು ॥೪॥

ಶರಣಾಗತಿಯೆ ಮೋಕ್ಷಕೆ ದಾರಿಯು
ಭಕ್ತರಿಗಿಲ್ಲವು ಅಂತಿಮ ಸ್ಮೃತಿಯು ।
ದೇಹಾವಸಾನ ನಂತರ ಮೋಕ್ಷ
ಪ್ರಾಪ್ತಿಯಪ್ಪುದು ಇದು ನಿಜವು ॥೫॥

ವರದರಾಜನು ಆದೇಶಿಸಿದನು
ಮಹಾಪೂರ್ಣರ ಆಶ್ರಯ ಪಡೆಯಲು ।
ಅವರಲಿ ಪಡೆದು ಪಂಚ ಸಂಸ್ಕಾರ
ವೈಷ್ಣವ ಆಚಾರ್ಯನೆನಿಸಿದೆಯೋ ॥೬॥

ನಂತರ ಪಡೆದೆಯೋ ಯಾಮುನಾಚಾರ್ಯರ
ಪ್ರಥಮ ಅಂತಿಮ ದರುಶನವ ।
ಅವರ ಇಷ್ಟವ ಸಲಿಸಲು ನೀನು
ಬ್ರಹ್ಮಸೂತ್ರಕೆ ಭಾಷ್ಯಬರೆದೆಯೋ ॥೭॥

ಸಂಸಾರ ತ್ಯಜಿಸಿ ಶ್ರೀರಂಗದಲ್ಲಿ
ಸನ್ಯಾಸವನು ಸ್ವೀಕರಿಸಿದೆಯೋ ।
ಗೋಷ್ಠೀಪೂರ್ಣರಿಂ ಮಂತ್ರೋಪದೇಶವ
ಪಡೆದು ಜಗದ ವಂದ್ಯನಾದೆಯೋ ॥೮॥

ಶ್ರೀ ಭಾಷ್ಯನಂತರ ರಚಿಸಿದೆ ಗುರುವೆ
ವೇದಾಂತ ಸಂಗ್ರಹ, ವೇದಾಂತ ದೀಪ ।
ವೇದಾಂತ ಸಾರ ಗೀತಾಭಾಷ್ಯ
ಗದ್ಯತ್ರಯ ಅಮರಕೃತಿಗಳ ॥೯॥

ತಿರುಪತಿಯಲ್ಲಿ ಶ್ರೀನಿವಾಸನನು
ವಿಷ್ಣುದೇವನೆಂದು ನಿರ್ಣಯಿಸಿ ।
ಅಲ್ಲಿಯ ವಿವಾದವನ್ನು ತೊಳೆದು
ಸ್ವಾಮಿಗೆ ಉತ್ಸವ ಮಾಡಿದೆಯೊ ॥೧೦॥

ಜಾತಿಗಳೆಣಿಸದೆ ಬಡವಬಲ್ಲಿದ
ಪಂಡಿತ ಪಾಮರರೆನ್ನದೆ ।
ಸರ್ವರಿಗೂ ಶ್ರೀ ವೈಷ್ಣವ ಧರ್ಮವ
ಬೋಧಿಸಿ ಶಿಷ್ಯರನಾಗಿಸಿದೆ ॥೧೧॥

ಇಳೈಯ ಪ್ಪೆರುಮಾಳೆನಿಸಿ ಶೋಭಿಸಿ
ವೈಷ್ಣವ ದೀಕ್ಷೆಯನಿತ್ತೆಯೋ ।
ಜೈನ ಕುಲದರಸು ಬಿಟ್ಟಿದೇವನನು
ಕರೆದೆಯೋ ವಿಷ್ಣುವರ್ಧನನೆಂದು ॥೧೨॥

ಶಿಷ್ಯರೊಡಗೂಡಿ ಯದುಗಿರಿಯಲ್ಲಿ
ಗುಡಿಗೋಪುರಗಳ ಕಟ್ಟಿಸಿದೆ ।
ಚೆಲುವರಾಯನ ಉತ್ಸವ ಮೂರ್ತಿಯ
ದೆಹಲಿಯಿಂದ ನೀ ಬಿಜಯಿಸಿದೆ ॥೧೩॥

ಇಂತು ಹದಿನೆಂಟು ವರ್ಷಗಳು ಸಂ
ಚರಿಸಿ ಕನ್ನಡನಾಡಿನಲಿ ।
ವೈಷ್ಣವ ಧರ್ಮೋದ್ಧಾರ ಮಾಡಿ ಶ್ರೀ
ರಂಗಕೆ ತೆರಳಿದೆ ಸದ್ಗುರುವೆ ॥೧೪॥

ಗುರುವರ ನಿನ್ನಯ ಚರಣಕೆ ನಮಿಪೆವು
ನಾಮವ ಜಪಿಪೆವು ಸಂತಸದಿ ।
ಕರುಣದಿಂದಲಿ ಪೊರೆಯೊ ನಮ್ಮನು
ವಿಷ್ಣುಸಾನ್ನಿಧ್ಯವ ದೊರಕಿಸೊ ನಮಗೆ ॥೧೫॥

— ❋ —

ಶ್ರೀ

# ಸದ್ಗುರು
# ಶ್ರೀ ರಾಮಾನುಜರ ಅಂತಿಮ ಸಂದೇಶ

1. ನಿಮ್ಮ ಧಾರ್ಮಿಕ ಗುರುವಿನಂತೆ ಶ್ರೀ ವೈಷ್ಣವರನ್ನೂ ಆರಾಧಿಸಿರಿ.
2. ಹಿಂದಿನ ಆಚಾರ್ಯರ ಉಪದೇಶಗಳಲ್ಲಿ ಅವಿಚ್ಛಿನ್ನ ವಿಶ್ವಾಸವಿಡಿ.
3. ನಿಮ್ಮ ಇಂದ್ರಿಯಗಳ ದಾಸರಾಗಬೇಡಿರಿ.
4. ಪ್ರಾಪಂಚಿಕ ಜ್ಞಾನ ಮಾತ್ರದಿಂದಲೇ ತೃಪ್ತರಾಗಬೇಡಿರಿ.
5. ದೇವರ ಲೀಲಾ ಮಹಿಮೆಗಳನ್ನು ಬೋಧಿಸುವ, ಸೃಷ್ಟಿಯ ಅದ್ಭುತಗಳನ್ನು ತಿಳಿಸುವ, ಪುಸ್ತಕಗಳನ್ನು ಪದೇ ಪದೇ ಓದಿರಿ.
6. ನಿಮ್ಮ ಭಾವನೆಗಳತ್ತ ಉಪೇಕ್ಷೆ ಇರಲಿ.
7. ದೇವರನಾಮ, ಮಹಿಮೆಗಳನ್ನು ಕೇಳಿ ಸಂತೋಷಪಡುವಷ್ಟೇ ಭಕ್ತರ ನಾಮ ಮಹಿಮೆಗಳನ್ನೂ ಕೇಳಿ ಸಂತೋಷಪಡಿರಿ.
8. ದೈವಭಕ್ತನ ಸೇವೆ ಮಾಡುವವನು ಅತಿಶೀಘ್ರವಾಗಿ ಪರಮಾತ್ಮನ ಕೃಪೆಗೆ ಪಾತ್ರನಾಗುತ್ತಾನೆಂಬುದನ್ನು ಮರೆಯ ಬೇಡಿರಿ. ಪರಮಾತ್ಮನ ಹಾಗೂ ಭಕ್ತರ ಸೇವೆ ಮಾಡುವನಕ ನೀವು ಎಷ್ಟೇ ಜ್ಞಾನಿಗಳಾದಾಗ್ಯೂ ರಕ್ಷಣೆ ಪಡೆಯಲಾರಿರಿ.
9. ವೈಷ್ಣವನ ಜೀವನವನ್ನು ತಮ್ಮ ಸ್ವಾರ್ಥಕ್ಕಾಗಿ ಬಳಿಸಿ ಕೊಳ್ಳಬೇಡಿರಿ.

